




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

Vol-16 Issue No. 02 February - 2019 ₹ 10/-




Kodagu District Administration in collaboration with Voluntary Organisations Celebrated 120th Birthday of Field Marshall K.M. Cariappa all over the District. As part of the Celebrations, the Rovers of Virajpete Govt. First Grade College Organised a Cycle Rally with placards in the Town.



Post Master General of Karnataka Col. Aravind Varma, Deputy Commissioner of Police Sri Ravi D. Chennannanavar, State Chief Commissioner Sri P.G.R. Sindhia released a "Special Postal Cover" broughtout by Karnataka Postal Circle at State Headquarters, Bengaluru on 22nd February 2019 and paid their humble tributes to the Respected Memory of Lord & Lady Baden Powell on the occassion of their Birthday-World Scout's Day & Thinking Day. Vice President Sri Kondajji B. Shanmukhappa, JSS(G) Smt. B.V. Ramalatha, Sr. Supt. of Post Office Sri Sandesh Mahadevappa, Asst. Supt. of Post Sri Amith Jha and others were present.



BBMP District Bharat Scouts and Guides observed the "National De Worming Day" on 8th Feb 2019 at the premises of the BBMP Council Building. Smt Gangambike, Mayor of Bengaluru inaugurated. Sri P.G.R. Sindhia, State Chief Commissioner, Sri Padmanabha Reddy, Leader of Opposition, Sri Randeep .D, Additional Commissioner (Administration), Sri S.G. Raveendra, Special Commissioner (Education) and Sri Imran Pasha, Chairman, Education Standing Committee and 500 Scouts and Guides, Cubs and Bulbuls and Unit Leaders were present.

Mr. Subijoy Dutta, Water Management Expert and Director, Rivers of the World Foundation, Crofton, USA has interacted with Rovers and Rangers of BBMP Degree College on 18th February 2019 at Kondajji Basappa Auditorium, Bengaluru. Sri P.G.R. Sindhia, State Chief Commissioner and other State and District Officials were present.





Condolence Meeting was held on 16th Feb 2019 at Kondajji Basappa Auditorium to Pay Respectful Homage to our Martyrs of Pulvama Attack. Unit Leaders from BBMP District Officials of State Headquarters and Karnataka Renewable Energy Development Ltd. attended.

ಫೆಬ್ರವರಿ 22ರಂದು ಶಾಂತಿಗೃಹದ ಕೊಂಡಜ್ಜಿ ಬಸಪ್ಪ ಭವನದಲ್ಲಿ ಜರುಗಿದ ವಿಶ್ವಚಿಂತನೆ ಮತ್ತು ವಿಶ್ವ ಭ್ರಾತೃತ್ವ ದಿನಾಚರಣೆ ಸಮಾರೋಪ ಸಮಾರಂಭದಲ್ಲಿ ಡಾ. ಜಿ.ವಿ. ಸಹನ, ನೇತ್ರ ತಜ್ಞರು, ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಗೈಡ್ ಆಯುಕ್ತರಾದ ಶ್ರೀಮತಿ ಗೀತಾ ನಟರಾಜ್, ಮಾಜಿ ಸಹಾಯಕ ರಾಜ್ಯ ಆಯುಕ್ತರಾದ ಶ್ರೀಮತಿ ಜೀವರತ್ನ ಬಿಸ್‌ನೀರ್ ಶ್ರೀಮತಿ ಎನ್.ಕೆ. ಛಾಯಾ ಮತ್ತು ಶ್ರೀಮತಿ ಅರುಣಾಮಾಲ ಅವರುಗಳು ಚಿತ್ರದಲ್ಲಿದ್ದಾರೆ.



# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# KARNATAKA Scout & Guide

MONTHLY NEWS MAGAZINE




ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka



ಸಂಚಿಕೆಯ ವಾರ್ಷಿಕ ಚಂದಾ ರೂ. 100/-

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39, ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.


## ಪರಿವಿಡಿ







# ರಾಜ್ಯ ಮುಖ್ಯ ಆಯುಕ್ತರ ನುಡಿ

**ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,**

**ಸಸ್ನೇಹ ನಮಸ್ಕಾರಗಳು**

ಫೆಬ್ರವರಿ 14, ಇತ್ತೀಚಿನ ಭಾರತದ ಇತಿಹಾಸದಲ್ಲಿ ಕರಾಳದಿನ. ಕಾಶ್ಮೀರದ ಗಡಿಯಲ್ಲಿ ದೇಶವನ್ನು ರಕ್ಷಿಸುತ್ತಿರುವ ಸಿ.ಆರ್.ಪಿ.ಎಫ್. ಯೋಧರ ಮೇಲೆ ಉಗ್ರವಾದಿಗಳ ದಾಳಿಯಾಗಿ 41 ಜನರು ಭೀಕರವಾಗಿ ಹತ್ಯೆಗೀಡಾದರು. ಅವರ ತಂಡವು ಜಮ್ಮು–ಶ್ರೀನಗರ ರಾಷ್ಟ್ರೀಯ ಹೆದ್ದಾರಿಯಲ್ಲಿ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿತ್ತು. ಮದ್ದು ಗುಂಡುಗಳಿಂದ ತುಂಬಿದ್ದ ಕಾರಿನಲ್ಲಿದ್ದ ಉಗ್ರವಾದಿ ಮಾಡಿದ ಅಪಘಾತದ ಪರಿಣಾಮವಿದು. ದೇಶದಾದ್ಯಂತ ನಾಗರಿಕರು ಅಪಾರವಾಗಿ ನೊಂದಿದ್ದಾರೆ. ಸಾಮೂಹಿಕ ಮೌನಾಚರಣೆಗಳು, ಬಂದ್‌ಗಳು, ಮೊಂಬತ್ತಿ ಮೆರವಣಿಗೆಗಳು, ಸಾಮಾಜಿಕ ಜಾಲತಾಣದಲ್ಲಿ, ಮಾಧ್ಯಮಗಳಲ್ಲಿ ಜನರು ತಮ್ಮ ಕಾಳಜಿಯನ್ನು, ಆತಂಕವನ್ನು ತೋರಿಸಿದ್ದಾರೆ.



ವರ್ಷದಿಂದ ವರ್ಷಕ್ಕೆ ಗಡಿಗಳಲ್ಲಿ, ವಿಶೇಷವಾಗಿ ಪಾಕಿಸ್ತಾನದ ಗಡಿಯಲ್ಲಿ ನಡೆಯುತ್ತಿರುವ ಚಕಮಕಿಗಳು, ಗಡಿಯ ಉಲ್ಲಂಘನೆ ಮತ್ತು ಉಗ್ರಗಾಮಿಗಳ ಆತ್ಮಹತ್ಯಾ ದಾಳಿಗಳು, ನಮ್ಮ ಸ್ಥೈರ್ಯವನ್ನು ಕುಂದಿಸುವ ಮತ್ತು ದೇಶದ ಸಾಮಾಜಿಕ ಶಾಂತಿಯನ್ನು ಕದಡಲು ನಡೆಸುವ ಪ್ರಯತ್ನಗಳಾಗಿದೆ. ಕಳೆದ ವರ್ಷಗಳಲ್ಲಿ, ಹಿಂದಿನ ಸಾಲಿಗಿಂತ ಹೆಚ್ಚು ಯೋಧರು ವೀರಮರಣವನ್ನು ಹೊಂದಿದ್ದಾರೆ. ಅವರ ಕುಟುಂಬಗಳು ಅತಂತ್ರವಾಗಿದೆ.

ನಮ್ಮ ಗಡಿಗಳನ್ನು ರಕ್ಷಿಸುವ, ಉಗ್ರವಾದಿಗಳನ್ನು ಶಿಕ್ಷಿಸುವ ಕಾರ್ಯವನ್ನು ನಮ್ಮ ಸರ್ಕಾರವು ಕೈಗೊಂಡಿದೆ. ಈ ವಿಷಮ ಪರಿಸ್ಥಿತಿಯಲ್ಲಿ ನಾಗರಿಕರೆಲ್ಲರೂ, ವಿಶೇಷವಾಗಿ ಸ್ಕೌಟ್ ಚಳುವಳಿಯಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಂಡಿರುವ ನಾವೆಲ್ಲರೂ ಸರ್ಕಾರಕ್ಕೆ ನಮ್ಮ ಸಂಪೂರ್ಣ ಸಹಕಾರವನ್ನು ನೀಡಬೇಕು. ಅನಗತ್ಯವಾಗಿ ಭಯವನ್ನು, ಸುಳ್ಳು ವದಂತಿಗಳನ್ನು ಹಬ್ಬಿಸುವುದನ್ನು ತಡೆಗಟ್ಟಬೇಕು. ರಾಷ್ಟ್ರ ಭಕ್ತಿಯನ್ನು ಉದ್ದೀಪಿಸುವ ಕಾರ್ಯಕ್ರಮಗಳನ್ನು, ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು.



ನಮ್ಮ ಸೈನ್ಯದಲ್ಲಿ ಕೆಲಸ ಮಾಡುತ್ತಿರುವ ಯೋಧರ ಬಗ್ಗೆ ನಾವೆಲ್ಲರೂ ವಿಶೇಷವಾಗಿ ಕಾಳಜಿಯನ್ನು ತೋರುವುದು ಅಗತ್ಯ. ಅವರ ಕುಟುಂಬಗಳಿಗೆ ಮಾನಸಿಕ ಸ್ಥೈರ್ಯವನ್ನು ಒದಗಿಸುವ ಅಗತ್ಯವಿದ್ದಲ್ಲಿ ಇತರ ಎಲ್ಲ ರೀತಿಯ ಸಹಕಾರವನ್ನು ನೀಡಬೇಕು. ಇದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಆದರ್ಶ ಎಂದು ನಾನು ಭಾವಿಸುತ್ತೇನೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ಪರವಾಗಿ ಉಗ್ರಗಾಮಿ ದಾಳಿಯಲ್ಲಿ ಹತರಾದ ಯೋಧರಿಗೆ ನಮ್ಮ ಗೌರವಪೂರ್ವಕ ನಮನಗಳನ್ನು ಮತ್ತು ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ. ಅವರ ಬಲಿದಾನವು ನಷ್ಟವಾಗುವುದಿಲ್ಲ. ಯೋಧರ ಕುಟುಂಬಗಳಿಗೆ ಸಾಂತ್ವನವನ್ನು ಹೇಳಬಯಸುತ್ತೇನೆ. ಅವರ ನೋವಿನಲ್ಲಿ ನಾವು ಭಾಗಿಯಾಗಿದ್ದೇವೆ. ಅವರಿಗಾಗಿರುವ ಅಪಾರವಾದ ನಷ್ಟವನ್ನು ತಾಳಿಕೊಳ್ಳುವ ಶಕ್ತಿಯನ್ನು ನೀಡಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ. ದಾಳಿಯಲ್ಲಿ ಗಾಯಗೊಂಡ ಯೋಧರು ಶೀಘ್ರವಾಗಿ ಗುಣಮುಖರಾಗಲಿ ಎಂದು ಪ್ರಾರ್ಥಿಸುತ್ತೇನೆ.

ಬೇಸಿಗೆಯ ಬಿಸಿಲು ಹೆಚ್ಚಾಗಿದೆ, ಹೀಗಾಗಿ ರಾಜ್ಯದ ಹಲವಾರು ಅರಣ್ಯ ಪ್ರದೇಶಗಳಲ್ಲಿ ಕಾಳ್ಗಿಚ್ಚು ಕಾಣಿಸಿಕೊಂಡಿದೆ.



ಚಾಮರಾಜನಗರ ಜಿಲ್ಲೆಯ ಬಂಡೀಪುರದಲ್ಲಿ ಹಬ್ಬುತ್ತಿದ್ದ ಕಾಳ್ಗಿಚ್ಚನ್ನು ನಂದಿಸಲು ರೋವರ್ಸ್‌ಗಳು ಪ್ರಯತ್ನ ಮಾಡಿದ್ದಾರೆ. ಈ ಬಗ್ಗೆ ವರದಿಯನ್ನು ತಮಿಳು ದಿನಪತ್ರಿಕೆ "ದಿನ ಮಲರ್" ವರದಿ ಮಾಡಿದೆ. ಚಾಮರಾಜನಗರ ಜಿಲ್ಲೆಯ ರೋವರ್ಸ್‌ಗಳು ನಮ್ಮ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಈ ವರ್ಷದ ಗಣರಾಜ್ಯೋತ್ಸವದ ಪಥಸಂಚಲನದಲ್ಲಿ ರಾಜ್ಯದ ವಿವಿಧ ಜಿಲ್ಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ ಘನವೆತ್ತ ರಾಜ್ಯಪಾಲರು ಮತ್ತು ಸನ್ಮಾನ್ಯ ಮುಖ್ಯಮಂತ್ರಿ ಅವರಿಂದ ಪ್ರಥಮ ಬಹುಮಾನವನ್ನು ಪಡೆದಿರುವುದಕ್ಕಾಗಿ ನಾನು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ಸಾಧನೆಯನ್ನು ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್ ಹೇಗೆ ಮಾಡಿದರು ಎಂಬುವುದನ್ನು ವಿಶ್ಲೇಷಿಸಬೇಕಿದೆ. ವಿವಿಧ ಜಿಲ್ಲೆಗಳಿಂದ ಆಯ್ದ ಸ್ಕೌಟ್-ಗೈಡ್ಸ್‌ಗಳಿಗೆ ಒಂಭತ್ತು ದಿನಗಳ ಸತತವಾದ ತರಬೇತಿಯನ್ನು ರಾಜ್ಯ ಕಾರ್ಯಾಲಯದಲ್ಲಿ ನೀಡಲಾಯಿತು. ಅವರುಗಳು ಅತ್ಯಂತ ಶ್ರದ್ಧೆಯಿಂದ ತರಬೇತಿಯಲ್ಲಿ ಭಾಗವಹಿಸಿದ್ದರು. ಶ್ರದ್ಧೆ ಮತ್ತು ಕಾರ್ಯತತ್ಪರತೆಯ ಮೂಲಕ ನಿಶ್ಚಯಿಸಿದ ಗುರಿ ಸಾಧನೆ ಮಾಡಬಹುದು ಎಂಬುವುದಕ್ಕೆ ಈ ಪ್ರಶಸ್ತಿಯು ಸಾಕ್ಷಿಯಾಗಿದೆ. ಈ ಹೆಮ್ಮೆಯನ್ನು ಮಾದರಿಯಾಗಿ ಇಟ್ಟುಕೊಂಡು ನಾವು ಮುಂದೆ ಸಾಗಬೇಕು. ವಿವಿಧ ಜಿಲ್ಲೆಗಳಲ್ಲಿ ಕೂಡ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳು ಪಥಸಂಚಲನೆಯಲ್ಲಿ ಭಾಗವಹಿಸಿ, ಬಹುಮಾನಗಳನ್ನು ಪಡೆದುಕೊಂಡಿದ್ದಾರೆ. ಭಾಗವಹಿಸಿದ ಎಲ್ಲರನ್ನೂ ನಾನು ಅಭಿನಂದಿಸುತ್ತೇನೆ.

ಫೆಬ್ರವರಿ 18ರಂದು ಬಿ.ಬಿ.ಎಂ.ಪಿ ಜಿಲ್ಲಾ ಸಂಸ್ಥೆಯು ಒಂದು ವಿಶಿಷ್ಟವಾದ ಕಾರ್ಯಕ್ರಮವನ್ನು ನಡೆಸಿತು. ರಿವರ್ಸ್ ಆಫ್ ದ ವರ್ಲ್ಡ್ ಫೌಂಡೇಷನ್, ಕ್ರೋಫ್ಟನ್, ಅಮೇರಿಕಾ ಇವರು ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್‌ಗಳೊಂದಿಗೆ "ನೀರಿನ ವ್ಯವಸ್ಥಾಪನೆ"ಯ ಬಗ್ಗೆ ಉಪಯುಕ್ತವಾದ ಸಂವಾದವನ್ನು ಇಟ್ಟುಕೊಂಡಿದ್ದರು. ಪ್ರಪಂಚದ ನದಿ ಮತ್ತು ತೊರೆಗಳನ್ನು ಪುನರುಜ್ಜೀಸುವುದು ಮತ್ತು ರಕ್ಷಿಸುವ ಕಾರ್ಯಕ್ರಮಗಳನ್ನು ಅವರು ಹಮ್ಮಿಕೊಂಡಿದ್ದಾರೆ. ಫೌಂಡೇಷಿನ್ನಿನ ಉದ್ದೇಶಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಳೆದ ಎರಡು ವರ್ಷಗಳಿಂದ ನಡೆಸುತ್ತಿರುವ "ನೀರನ್ನು ಉಳಿಸಿ" ಚಳುವಳಿ ಮತ್ತು ಪರಿಸರ ಕಾಳಜಿಗೆ ಪೂರಕವಾಗಿದೆ.




ಫೆಬ್ರವರಿ 22ರಂದು ಲಾರ್ಡ್ ಮತ್ತು ಲೇಡಿ ಬೆಡನ್ ಪೊವೆಲ್‌ರ ಜನ್ಮದಿನ. ಈ ದಿನವನ್ನು ಸಂಸ್ಥಾಪಕರ ಮತ್ತು ವಿಶ್ವಚಿಂತನಾ ಹಾಗೂ ವಿಶ್ವಭ್ರಾತೃತ್ವದ ಹಬ್ಬವಾಗಿ ನಾವು ಆಚರಿಸುತ್ತೇವೆ. ಈ ವರ್ಷದ ವಿಶ್ವಚಿಂತನಾ ದಿನ ಧ್ಯೇಯೋದ್ದೇಶವು "ನಾಯಕತ್ವ". ಇದಕ್ಕೆ ಸಂಬಂಧಿಸಿದಂತೆ ಕಾರ್ಯಕ್ರಮಗಳನ್ನು ರಾಜ್ಯ ಮತ್ತು ಜಿಲ್ಲಾ ಘಟಕಗಳು ಹಮ್ಮಿಕೊಂಡಿದೆ.

ಬೆಂಗಳೂರಿನಲ್ಲಿ ಬೆಳಗ್ಗೆ ಧ್ವಜಾರೋಹಣದಿಂದ ಆರಂಭವಾದ ಕಾರ್ಯಕ್ರಮವು ಕಬ್ಸ್, ಬುಲ್‌ಬುಲ್ಸ್ ಮಕ್ಕಳಿಗೆ ವಿವಿಧ ವಿನೋದ ಆಟಗಳು, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ ನಾಯಕತ್ವ ಮತ್ತು ಸ್ಕೌಟಿಂಗ್, ಪ್ರಬಂಧ, ಚಿತ್ರಕಲಾ ಸ್ಪರ್ಧೆಗಳ ಮೂಲಕ ನಾಯಕತ್ವದ ಗುಣಗಳ ಬಗ್ಗೆ ಪ್ರೇರಣಾತ್ಮಕವಾದ ಕಾರ್ಯಕ್ರಮಗಳನ್ನು ನಡೆಸಲಾಯಿತು.

ಕರ್ನಾಟಕ ಪೋಸ್ಟ್ ಮಾಸ್ಟರ್ ಜನರಲ್‌ರವರಾದ ಕರ್ನಲ್ ಅರವಿಂದ್ ವರ್ಮ ಅವರು ಇದೇ ಮೊದಲ ಬಾರಿಗೆ ಸ್ಕೌಟ್ ದಿನದ ಅಂಗವಾಗಿ ಕರ್ನಾಟಕ ಅಂಚೆ ಇಲಾಖೆ ಹೊರತಂದಿರುವ **"ವಿಶೇಷ ಅಂಚೆ ಲಕೋಟೆಯನ್ನು"** ಬಿಡುಗಡೆ ಮಾಡಿದರು. ಇದು ಹೆಮ್ಮೆಯ ವಿಷಯ ಮತ್ತು ನಮ್ಮ ಚಳುವಳಿಗೆ ಸರ್ಕಾರದಿಂದ ಸಂದ ಗೌರವವಾಗಿದೆ.



ಕಾರ್ಯಕ್ರಮದಲ್ಲಿ ಭಾಗವಹಿಸಿದ ಬೆಂಗಳೂರು ಪಶ್ಚಿಮದ ಉಪಪೊಲೀಸ್ ಆಯುಕ್ತರಾದ ಶ್ರೀ ರವಿ ಡಿ. ಚೆನ್ನಣ್ಣನವರು ಅವರು ಯುವ ಶಕ್ತಿ ಮತ್ತು ನಾಯಕತ್ವದ ಬಗ್ಗೆ ಮಾತನಾಡುತ್ತಾ ತಮ್ಮ ಬಾಲ್ಯದ ಸ್ಕೌಟ್ ಅನುಭವವನ್ನು ಶಿಕ್ಷಣದ ಮಹತ್ವ, ಶಿಸ್ತು, ಸಮಯ ಪ್ರಜ್ಞೆ, ಜವಾಬ್ದಾರಿ, ಕರ್ತವ್ಯ ನಿರ್ವಹಣೆ, ಪ್ರಾಮಾಣಿಕತೆಗಳ ಬಗ್ಗೆ ಮನಮುಟ್ಟುವಂತೆ ಮಾತನಾಡಿದರು. ಡಾ॥ ಜೆ.ವಿ. ಸಹನ, ನೇತ್ರ ತಜ್ಞರು, ಪಾರ್ವತಿ ನೇತ್ರಾಲಯ ಇವರು ಮಹಿಳಾ ಸಮಾನತೆ ಮತ್ತು ಸಬಲೀಕರಣದ ಬಗ್ಗೆ ಮಾತನಾಡಿದರು. ಚಿಂತನಾ ದಿನವು ತನ್ನ ಧ್ಯೇಯೋದ್ದೇಶಗಳನ್ನು ಸಾರ್ಥಕ ಪಡಿಸಿಕೊಂಡಿದ್ದು ನನಗೆ ಬಹಳ ಸಂತೋಷವನ್ನುಂಟುಮಾಡಿದೆ.

ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಗಳು ಪ್ರತಿಜ್ಞಾ ಸ್ವೀಕಾರ, ಪಥಸಂಚಲನೆ, ಪ್ರಬಂಧ ಸ್ಪರ್ಧೆ, ಮಾನವ ಸರಪಳಿ, ಮ್ಯಾರಥಾನ್, ಉಪನ್ಯಾಸ, ಸಾಂಸ್ಕೃತಿಕ ಮತ್ತು ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಬಹಳ ಸಂತೋಷದ ವಿಷಯ.



ಅಂತರರಾಷ್ಟ್ರೀಯ ಚಳವಳಿಯ ಸಂಸ್ಥಾಪಕರಾದ ಲಾರ್ಡ್ ಬೆಡನ್ ಪೊವೆಲ್‌ರವರು 22 ಫೆಬ್ರವರಿ 1857ರಲ್ಲಿ ಲಂಡನ್‌ನಲ್ಲಿ ಜನಿಸಿದರು. ಬ್ರಿಟಿಷ್ ಸೈನ್ಯದಲ್ಲಿ 1876 ರಿಂದ 1910ರ ತನಕ ಸೇವೆ ಸಲ್ಲಿಸಿ ನಾಲ್ಕು ಯುದ್ಧಗಳಲ್ಲಿ ಭಾಗವಹಿಸಿ, ಅವರು ಬರೆದ ಪುಸ್ತಕ "ಸ್ಕೌಟಿಂಗ್ ಫಾರ್ ಬಾಯ್ಸ್"(1908) ಸ್ಕೌಟ್ ಚಳುವಳಿಯ ಸ್ಥಾಪನೆಗೆ ಸ್ಫೂರ್ತಿಯನ್ನು ನೀಡಿತು. ಸೈನ್ಯದಿಂದ ನಿವೃತ್ತಿಯ ನಂತರ ಸ್ಕೌಟ್ಸ್ ಸಂಸ್ಥೆಯನ್ನು ಸ್ಥಾಪಿಸಿದರು. 1911ರಲ್ಲಿ ಗೈಡ್ಸ್ ಸಂಸ್ಥೆ ಪ್ರಾರಂಭವಾಯಿತು. ಭಾರತದಲ್ಲಿ, ಬೆಂಗಳೂರಿನಲ್ಲಿ 1909ರಲ್ಲಿ ಸ್ಕೌಟ್ ಚಳವಳಿಯು ಪ್ರಾರಂಭವಾಯಿತು. ವೇಗವಾಗಿ ಬೆಳೆದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ, ಇಂದು ವಿಶ್ವದ 216 ದೇಶಗಳಲ್ಲಿ ಪ್ರಸರಿಸಿದೆ.

ಲೇಡಿ ಅಲೇವ್ ಬೇಡನ್ ಪೊವೆಲ್‌ರವರು ಹುಟ್ಟಿದ್ದು ಫೆಬ್ರವರಿ 22ರಂದೇ. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಅವರು ಸಲ್ಲಿಸಿರುವ ಸೇವೆಯು ಅಪಾರವಾಗಿದೆ. ಸಂಸ್ಥಾಪಕರ ದಿನದಂದು ನಾವೆಲ್ಲರೂ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರತಿಜ್ಞೆ ಮತ್ತು ತತ್ವಗಳಿಗೆ ಬದ್ಧರಾಗಿ ಜೀವನವನ್ನು ನಡೆಸುತ್ತೇವೆಂದು ಪ್ರತಿಜ್ಞೆ ಸ್ವೀಕರಿಸಬೇಕು.

ಮೂರನೆ ವರ್ಷದ "ಕರ್ನಾಟಕ ದರ್ಶನ"ದ ಕಾರ್ಯಕ್ರಮವು ಯಶಸ್ವಿಯಾಗಿ ನಡೆದಿದೆ. ರಾಜ್ಯದಾದ್ಯಂತ ನಮ್ಮ ಮಕ್ಕಳು ಓಡಾಡಿದ್ದಾರೆ. ವಿಶೇಷವಾಗಿ ಸಾಂಸ್ಕೃತಿಕ, ಐತಿಹಾಸಿಕ ಸ್ಥಳಗಳನ್ನು ನೋಡಿದ್ದಾರೆ. ಕರ್ನಾಟಕದ ಕಲೆ ಮತ್ತು ಜನಜೀವನವನ್ನು ಸಮೀಪದಿಂದ ಕಂಡಿದ್ದಾರೆ. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಎಲ್ಲ ಮಕ್ಕಳಿಗೂ ನನ್ನ ಅಭಿನಂದನೆಗಳು. ಕರ್ನಾಟಕ ದರ್ಶನದ ಈ ಪ್ರವಾಸವನ್ನು ಅವರು ತಮ್ಮ ಜೀವನಪರ್ಯಂತ ನೆನಪಿನಲ್ಲಿಡುತ್ತಾರೆ. ಅವರ ನೆನಪುಗಳನ್ನು ಪ್ರವಾಸದ ಅನುಭವಗಳನ್ನು ಉದ್ದೀಪನ-ಗೊಳಿಸಲು ರಾಜ್ಯ ಮಟ್ಟದ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಲಾಗಿದೆ. ನಿಮ್ಮ ಪ್ರಬಂಧ ಕನ್ನಡ ಮತ್ತು ಇಂಗ್ಲೀಷ್ ಭಾಷೆಯಲ್ಲಿ ಇರಬಹುದು. ಉತ್ತಮವಾದ ಎರಡೂ ಭಾಷೆಯ ಐದು, ಐದು ಪ್ರಬಂಧಗಳಿಗೆ ಬಹುಮಾನ ನೀಡಲಾಗುವುದು. ಎಲ್ಲರೂ ಶೀಘ್ರದಲ್ಲಿ ನಿಮ್ಮ ಪ್ರಬಂಧಗಳನ್ನು ಕಳುಹಿಸಿಕೊಡಿ.

ಕರ್ನಾಟಕ ದರ್ಶನದ ರೀತಿಯಲ್ಲಿ ಈ ಸಾಲಿನಲ್ಲಿ ಕಬ್ಸ್ ಮತ್ತು ಬುಲ್‌ಬುಲ್ಸ್ ಮಕ್ಕಳ "ಜಿಲ್ಲಾ ದರ್ಶನ" ಕಾರ್ಯಕ್ರಮವನ್ನು ಏರ್ಪಡಿಸಲಾಗಿದೆ. ಒಂದು ಸಾವಿರ ಮಕ್ಕಳು ಇದರಲ್ಲಿ ಭಾಗವಹಿಸಿದ್ದಾರೆ. ಪ್ರಥಮಬಾರಿಗೆ ನಡೆಯುತ್ತಿರುವ ಈ ವಿಶಿಷ್ಟ ಕಾರ್ಯಕ್ರಮವು ಯಶಸ್ವಿಯಾಗಲಿ ಎಂದು ನಾನು ಹಾರೈಸುತ್ತೇನೆ. ಪ್ರವಾಸದ ಸಂದರ್ಭದಲ್ಲಿ ಮಕ್ಕಳನ್ನು ಸುರಕ್ಷಿತವಾಗಿ ನೋಡಿಕೊಳ್ಳಿ, ಅವರಲ್ಲಿ ಆಸಕ್ತಿ ಹೆಚ್ಚಿಸುವುದರ ಕಡೆಗೆ ಗಮನವನ್ನು ನೀಡಿರಿ.

ಕರ್ನಾಟಕ ದರ್ಶನ ಮತ್ತು ಜಿಲ್ಲಾ ದರ್ಶನದ ಕಾರ್ಯಕ್ರಮಗಳಿಗೆ ಕರ್ನಾಟಕ ಸರ್ಕಾರವು ಉದಾರವಾಗಿ ಧನಸಹಾಯವನ್ನು ಮಾಡಿದೆ. ಎಲ್ಲರೂ ಮೆಚ್ಚಿರುವ ಸರ್ಕಾರದ ಈ ಘನಕಾರ್ಯಕ್ಕಾಗಿ ನಾನು ಕರ್ನಾಟಕದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ.ಹೆಚ್.ಡಿ. ಕುಮಾರಸ್ವಾಮಿ ಮತ್ತು ಪ್ರವಾಸೋದ್ಯಮ ಸಚಿವರಾದ ಶ್ರೀ ಸಾ. ರಾ. ಮಹೇಶ್ ರವರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಹೃತ್ಪೂರ್ವಕವಾದ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.



ಕೆಲವಾರು ವಿಶಿಷ್ಟವಾದ ತರಬೇತಿ ಕಾರ್ಯಕ್ರಮಗಳನ್ನು ನಾವು ಹಮ್ಮಿಕೊಂಡಿದ್ದೇವೆ. ರೋವರ್ಸ್ ಮತ್ತು ರೇಂಜರ್ಸ್‌ಗಾಗಿ ರಾಜ್ಯ ಮಟ್ಟದ ಪಯೋನಿಯರಿಂಗ್ ಮತ್ತು ಸಾಹಸ ಚಟುವಟಿಕೆಗಳ ತರಬೇತಿ ಮತ್ತು ರೇಂಜರ್ಸ್‌ಗಾಗಿ ಕಡಲ ತೀರದ ಚಾರಣ ಆಸಕ್ತಿಯುತವಾಗಿದೆ. ಭಾಗವಹಿಸಿದವರು ನಿಮ್ಮ ಅನುಭವಗಳನ್ನು ಬರೆದು ಕಳುಹಿಸಿ. ನಮ್ಮ ಕಾರವಾರ ಜಿಲ್ಲೆಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ 5 ದಿನಗಳ ಕಾಲ ಶಸ್ತ್ರಾಸ್ತ್ರಗಳ ಸಂಪೂರ್ಣ ಮಾಹಿತಿ ತರಬೇತಿಯನ್ನು ಪೊಲೀಸ್ ಇಲಾಖೆಯು

ಸಹಯೋಗದಲ್ಲಿ ನೀಡಿದೆ. ರೈಫಲ್ ತರಬೇತಿಯಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಭಾಗವಹಿಸಿದ್ದು ಸಂತೋಷವಾದ ವಿಷಯ. ಕಾರವಾರ ಜಿಲ್ಲಾ ಸಂಸ್ಥೆಗೆ ಹಾರ್ದಿಕ ಅಭಿನಂದನೆಗಳು.

ಕರ್ನಾಟಕ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆದೇಶ ಸಂ: ಗ್ರಾಅಪ: 354 ಜಿಪಸ 2018 ದಿನಾಂಕ 04.12.2018ದ ಮೂಲಕ ರಾಜ್ಯದ ಎಲ್ಲಾ ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮಪಂಚಾಯತಿಗಳು ಸ್ವಂತ ಸಂಪನ್ಮೂಲಗಳಿಂದ ಆಯಾ ಜಿಲ್ಲೆ/ತಾಲ್ಲೂಕು/ಸ್ಥಳೀಯ ಸಂಸ್ಥೆಗಳಿಗೆ ಈ ಕೆಳಕಂಡಂತೆ ವಾರ್ಷಿಕ ವಂತಿಕೆಯನ್ನು ನೀಡಲು ಆದೇಶಿಸಿದ್ದಾರೆ.

| ಕ್ರ.ಸಂ | ವಿವರ | ಅನುದಾನದ ಮೊತ್ತ |
|---|---|---|
| 1 | ಜಿಲ್ಲಾ ಪಮಚಾಯಿತಿಗಳು | ರೂ. 50,000 |
| 2 | ತಾಲ್ಲೂಕು ಪಂಚಾಯಿತಿಗಳು | ರೂ. 10,000 |
| 3 | ಗ್ರಾಮ ಪಂಚಾಯಿತಿಗಳು | ರೂ. 5,000 |

ಸಂಬಂಧಿಸಿದ ಸಂಸ್ಥೆಗಳು ಸೂಕ್ತ ಕ್ರಮಗಳ ಮೂಲಕ ಅನುದಾನವನ್ನು ಬಿಡುಗಡೆ ಮಾಡಿಸಿಕೊಂಡು ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ತಮ್ಮ ವ್ಯಾಪ್ತಿಯಲ್ಲಿ ಯಶಸ್ವಿಯಾಗಿ ನಡೆಸಬೇಕೆಂದು ಕೋರುತ್ತೇನೆ.

"ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮಾಸಿಕ ವಾರ್ತಾಪತ್ರಿಕೆ" ಬಹಳ ಸುಂದರವಾಗಿ ಮೂಡಿಬರುತ್ತಿರುವುದನ್ನು ನೀವು ಗಮನಿಸುತ್ತಿರಬಹುದು. ಉತ್ತಮವಾದ ಕಾರಣ ಬಣ್ಣ ಬಣ್ಣದ ಛಾಯಚಿತ್ರಗಳು ಎಲ್ಲರ ಗಮನವನ್ನು ಸೆಳೆದಿದೆ. ಹೊಸ ರೀತಿಯ ಲೇಖನಗಳು, ಕವನಗಳು, ವರದಿಗಳು ನನಗೆ ಸಂತೋಷವನ್ನು ಉಂಟುಮಾಡಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮಕ್ಕಳು ಹೆಚ್ಚು ಹೆಚ್ಚಾಗಿ ಲೇಖನಗಳನ್ನು ನಮ್ಮ ವಾರ್ತಾಪತ್ರಿಕೆಗೆ ಕಳುಹಿಸಿ. ನಿಮ್ಮ ಸ್ಕೌಟಿಂಗ್ ಅನುಭವ, ಶಾಲೆಯ ಅನುಭವಗಳು, ಗೆಳೆಯರೊಂದಿಗೆ ಆಟ, ಪಾಠ ಮತ್ತು ಸಾಂಸ್ಕೃತಿಕ ಉತ್ಸವಗಳ ಬಗ್ಗೆ ಬರೆಯಿರಿ. ನಮ್ಮ ಪತ್ರಿಕೆಯು ನಿಮ್ಮ ಸೃಜನಶೀಲ ಕ್ರಿಯೆಗೆ ವೇದಿಕೆಯಾಗಲಿ.

ಸಂಪಾದಕ ಮಂಡಳಿಯನ್ನು ವಿಸ್ತರಿಸಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಸಾಧನೆ ಮಾಡಿರುವ ಹಲವಾರು ಹಿರಿಯರು ಈಗ ಮಂಡಳಿಯಲ್ಲಿದ್ದಾರೆ. ಈ ತಿಂಗಳಿಂದ ಅವರ ಲೇಖನಗಳು ಪತ್ರಿಕೆಯ ಮೌಲ್ಯವನ್ನು ಹೆಚ್ಚಿಸಲಿದೆ. ಪತ್ರಿಕೆಯನ್ನು ಇನ್ನಷ್ಟು ಅಂದವಾಗಿ ಮೌಲಿಕವಾಗಿ ಮಾಡಲು ನಿಮ್ಮಿಂದ ಸಲಹೆಗಳನ್ನು ನಿರೀಕ್ಷಿಸುತ್ತೇನೆ.

ಇದೀಗ ಪರೀಕ್ಷೆಯ ಸಮಯ, ನಿಮ್ಮ ಗಮನವನ್ನು ಸಂಪೂರ್ಣವಾಗಿ ವ್ಯಾಸಂಗದತ್ತ ನೀಡಿರಿ. ಪಠ್ಯದಲ್ಲಿ ಯಾವುದೇ ಅನುಮಾನವಿದ್ದಲ್ಲಿ ಸಂಕೋಚವಿಲ್ಲದೆ ಪೋಷಕರನ್ನು, ನಿಮ್ಮ ಅಧ್ಯಾಪಕರನ್ನು ಕೇಳಿರಿ. ಪಾಠಗಳನ್ನು ಪುನಾರಾವಲೋಕಿಸಿ.



ಪೂರ್ವ ಸಿದ್ಧತೆಯು ಯಶಸ್ಸಿನ ಸೋಪಾನ. ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ಪರೀಕ್ಷೆಗಳು ಮಹತ್ವದ್ದಾಗಿದೆ. ಮಕ್ಕಳ ಧೃಡ ಮತ್ತು ಶಾಂತ ಮನಸ್ಥಿತಿಯು ನಿಮ್ಮನ್ನು ಗೆಲುವಿನ ಕಡೆಗೆ ಕೊಂಡೊಯ್ಯತ್ತದೆ. ನಿಮ್ಮ ಬೆಳವಣಿಗೆಯಿಂದ, ನಿಮ್ಮ ತಂದೆ–ತಾಯಿಯವರಿಗೂ, ಶಿಕ್ಷಕರಿಗೂ ಮತ್ತು ನಮ್ಮ ಸಂಸ್ಥೆಗೂ ಗೌರವ ಬರಲೆಂದು ನಾನು ಬಯುಸುತ್ತೇನೆ. ನಿಮಗೆಲ್ಲರಿಗೂ ಶುಭವಾಗಲೆಂದು ನಾನು ಹೃದಯ ಪೂರ್ವಕವಾಗಿ ಹಾರೈಸುತ್ತೇನೆ.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

ತಮ್ಮ ವಿಶ್ವಾಸಿ

**(ಪಿ.ಜಿ.ಆರ್. ಸಿಂಧ್ಯ)**

**ರಾಜ್ಯ ಮುಖ್ಯ ಆಯುಕ್ತರು**

"Confidence and Hard-Work is the Best Medicine to kill the Disease called Failure. It will make You a Successful Person."

**Dr. A.P.J. Abdul Kalam**



# Regional Level Cubs & Bulbuls Utsav




The Bharat Scouts & Guides NHQ organised Southern Regional Level Cubs & Bulbuls Utsav at Kollam - Kerala State from January 18 to 22, 2019.

12 Cubs & 11 Bulbul of Jain Heritage School, Belagavi represented Karnataka State and participated in all the activities and competitions conducted at the Utsav. They took part in Folk Dance, Drawing, Bulbul Tree, TARA Story, Painting, Singing, Jungle Dance, Paper Cutting, Clay Modelling, Story telling, Utsav Mela, Food Plaza etc.

Out of 14 competitions, they have bagged prizes in 12 items & brought laurels to state. Cubs and Bulbuls were felicitated by Sri K. Raju, Hon'ble Minister for Forests & Smt. J. Merrcy Kutty Amma, Hon'ble Minister for Fishing , Harbour & Cashew Industry)

Director Ms. Sharaddha Khatawate, Principal Dr. Manjeet Jain & Chief Administrator Ms. Amee Doshi have congratulated all the participants and adult leaders for the Awards received by their school unit at the Regional Cubs-Bulbul Utsav.

# ರಾಜ್ಯ ಮಟ್ಟದ ತರಬೇತಿ ಶಿಬಿರಗಳು



ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯಿಂದ ಡಾ॥ ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಜನವರಿ 17 ರಿಂದ 23ರ ವರೆಗೆ ಮೂಲ ತರಬೇತಿ ಶಿಬಿರಗಳನ್ನು ನಡೆಸಲಾಯಿತು. ರೋವರ್ ಸ್ಕೌಟ್ ಲೀಡರ್‌ಗಳ ಶಿಬಿರದ ನಾಯಕರಾಗಿ ಶ್ರೀ ಎಂ. ಗಣಪತಿ ಎ.ಎಲ್.ಟಿ. (ಆರ್), ಮುಂದುವರಿದ ಸ್ಕೌಟ್ ಮಾಸ್ಟರ್ ಶಿಬಿರಕ್ಕೆ ಶ್ರೀ ಮಂಜುನಾಥಾಚಾರ್ ಎಲ್.ಟಿ. (ಎಸ್) ನಾಯಕರಾಗಿದ್ದು, ಮತ್ತೊಂದು ಮುಂದುವರಿದ ಸ್ಕೌಟ್ ಮಾಸ್ಟರ್ ಶಿಬಿರಕ್ಕೆ ಶ್ರೀ ಎಂ.ವಿ. ಜನಾರ್ಧನ್ ಎಲ್.ಟಿ. (ಎಸ್) ನಾಯಕರಾಗಿ ಸೇವೆ ಸಲ್ಲಿಸಿದರು.



ಮೂಲ ರೇಂಜರ್ ಲೀಡರ್‌ಗಳ ತರಬೇತಿ ಶಿಬಿರದ ನಾಯಕಿಯರಾಗಿ ಶ್ರೀಮತಿ ಶುಭ ಶಾಮಣ್ಣ ಎ.ಎಲ್.ಟಿ. (ಆರ್.) ಮುಂದುವರೆದ ಗೈಡ್ ಕ್ಯಾಪ್ಟನ್ ತರಬೇತಿ ಶಿಬಿರದ ನಾಯಕಿಯಾಗಿ ಶ್ರೀಮತಿ ಶುಭ ವಿಶ್ವನಾಥ್ ಎ.ಎಲ್.ಟಿ.(ಗೈ) ಸೇವೆ ಸಲ್ಲಿಸಿದರು.



ಶಿಬಿರಗಳಲ್ಲಿ ಎಸ್.ಓ.ಟಿ. ಪ್ರಕಾರ ಗುಣಾತ್ಮಕವಾದಂತಹ ತರಬೇತಿ ನಡೆಸಲಾಯಿತು. ತುಮಕೂರಿನ ಸಿದ್ಧಗಂಗಾ ಮಠದ ಶತಾಯುಷಿ ಪರಮಪೂಜ್ಯ ಶ್ರೀಶ್ರೀ ಶಿವಕುಮಾರ ಸ್ವಾಮಿಜಿಯವರ ನಿಧನಕ್ಕೆ ಶೋಕಾಚರಣೆ ಆಚರಿಸಿ, ಶ್ರದ್ಧಾಂಜಲಿ ಅರ್ಪಿಸಲಾಯಿತು.



ಶಿಬಿರದ ಮುಕ್ತಾಯ ಸಮಾರಂಭಕ್ಕೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಆಗಮಿಸಿ ಶಿಬಿರಾರ್ಥಿಗಳಿಗೆ ಸ್ಕೌಟಿಂಗ್-ಗೈಡಿಂಗ್ ಚಟುವಟಿಕೆಯನ್ನು ಆಸಕ್ತಿಯಿಂದ ನಡೆಸಲು ಪ್ರೋತ್ಸಾಹಿಸಿದರು. ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ ಮತ್ತು ಶ್ರೀ ಎಂ.ಎ. ಚೆಲ್ಲಯ್ಯನವರು ಉಪಸ್ಥಿತರಿದ್ದರು.



ರಾಜ್ಯ ತರಬೇತಿ ಸ್ಕೌಟ್ ಆಯುಕ್ತರಾದ ಶ್ರೀ ಎ.ಎಂ. ಶಂಕರ್ ಮತ್ತು ರಾಜ್ಯ ತರಬೇತಿ ಗೈಡ್ಸ್ ಆಯುಕ್ತೆ ಶ್ರೀಮತಿ ಕೆ.ವಿ. ಶಾಮಲಾ ಅವರುಗಳು ಶಿಬಿರಗಳನ್ನು ಸಂಘಟಿಸಿದರು.

# ಸಂಸ್ಥಾಪಕರ ಹುಟ್ಟು ಹಬ್ಬ
# ಚಿಂತನಾ ಮತ್ತು ವಿಶ್ವ ಭ್ರಾತೃತ್ವ ದಿನಾಚರಣೆ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯವತಿಯಿಂದ ಲಾರ್ಡ್ ಬೇಡನ್ ಪೋವೆಲ್ ಮತ್ತು ಲೇಡಿ ಅಲೇವ್ ಬೇಡನ್ ಪೋವೆಲ್‌ರವರ ಜನ್ಮ ದಿನಾಚರಣೆ, ಚಿಂತನಾ ದಿನಾಚರಣೆ ಮತ್ತು ವಿಶ್ವ ಭ್ರಾತೃತ್ವ ದಿನಾಚರಣೆಯನ್ನು ಅತ್ಯಂತ ಅರ್ಥಪೂರ್ಣವಾಗಿ ಫೆಬ್ರವರಿ 22ರಂದು ಕೊಂಡಜ್ಜಿ ಬಸಪ್ಪ ಸಭಾಂಗಣ ಮತ್ತು ರಾಜ್ಯ ಕೇಂದ್ರ ಕಛೇರಿ ಆವರಣದಲ್ಲಿ ಆಚರಿಸಲಾಯಿತು.



ಬೆಳಗ್ಗೆ 9.30ಕ್ಕೆ ಧ್ವಜಾರೋಹಣದೊಂದಿಗೆ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು. ನಂತರ ಕಬ್ಸ್, ಬುಲ್‌ಬುಲ್ಸ್ ಮಕ್ಕಳಿಗೆ ವಿವಿಧ ವಿನೋದ ಆಟಗಳನ್ನು , ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ನಾಯಕತ್ವ ಮತ್ತು ಸ್ಕೌಟಿಂಗ್, ಬೇಡನ್ ಪೋವೆಲ್‌ರವರ ಭಾವಚಿತ್ರ, ಶಿಬಿರದ ಚಿತ್ರಣಗಳ ಬಗ್ಗೆ ಪ್ರಬಂಧ ಸ್ಪರ್ಧೆ, ಚಿತ್ರಕಲಾ ಸ್ಪರ್ಧೆ, ಸಾಧನೆ ಮಾಡಿದ ನಾಯಕರುಗಳ ಹೆಸರುಗಳನ್ನು ಬರೆಯುವ ವಿವಿಧ ವಿನೋದಾತ್ಮಕ ಆಟಗಳು ಮತ್ತು ಸ್ಪರ್ಧೆಗಳ ಮೂಲಕ ಮಕ್ಕಳಿಗೆ ಚಿಂತನಾ ದಿನಾಚರಣೆಯ ಸಂದೇಶವಾದ "ನಾಯಕತ್ವ" ಇದರ ಬಗ್ಗೆ ಹೆಚ್ಚಿನ ಮಹತ್ವ ನೀಡಿ ಮಕ್ಕಳಲ್ಲಿ ನಾಯಕತ್ವದ ಗುಣ ಬೆಳೆಸಿಕೊಳ್ಳಲು ಈ ಕಾರ್ಯಕ್ರಮ ಪ್ರೇರಣೆ ನೀಡಿತು.




ಉದ್ಘಾಟನಾ ಸಮಾರಂಭದಲ್ಲಿ ಫೆಬ್ರವರಿ 14ರಂದು ಕಾಶ್ಮೀರದ ಪುಲ್ವಾಮಾದಲ್ಲಿ ನಡೆದ ಉಗ್ರರ ದಾಳಿಗೆ ಪ್ರಾಣತ್ಯಾಗ ಮಾಡಿದ ಸಿ.ಆರ್.ಪಿ.ಎಫ್. ಯೋಧರಿಗೆ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಕ್ಯಾಂಡಲ್ ಮೂಲಕ ದೀಪ ಬೆಳಗಿಸಿ ಅವರುಗಳ ಆತ್ಮಕ್ಕೆ ಒಂದು ನಿಮಿಷದ ಮೌನ ಪ್ರಾರ್ಥನೆಯೊಂದಿಗೆ ಚಿರಶಾಂತಿಯನ್ನು ಕೋರಲಾಯಿತು. ಇದೇ ಮೊದಲ ಬಾರಿಗೆ ವಿಶ್ವಸ್ಕೌಟ್ ದಿನದ ಅಂಗವಾಗಿ ವಿಶೇಷ ವಿನ್ಯಾಸದೊಂದಿಗೆ ಅಂಚೆ ಲಕೋಟೆಯನ್ನು ಕರ್ನಲ್ ಅರವಿಂದ್ ವರ್ಮಾ, ಪೋಸ್ಟ್ ಮಾಸ್ಟರ್ ಜನರಲ್, ಬೆಂಗಳುರು ಇವರು ಬಿಡುಗಡೆ ಮಾಡಿ ಸ್ಕೌಟಿಂಗ್ ಮಹತ್ವವನ್ನು ಎತ್ತಿ ಹಿಡಿದು ಮಕ್ಕಳನ್ನುದ್ದೇಶಿಸಿ ಉತ್ತಮವಾದ ಮಾತುಗಳನ್ನು ತಿಳಿಸಿ ಮಕ್ಕಳನ್ನು ಪ್ರೋತ್ಸಾಹಿಸಿದರು. ಶ್ರೀ ರವಿ ಡಿ. ಚನ್ನಣ್ಣನವರ್, ಉಪ ಪೋಲೀಸ್ ಆಯುಕ್ತರು, ಬೆಂಗಳೂರು ಪಶ್ಚಿಮ, ಇವರು ಮಕ್ಕಳಿಗೆ ಯುವಶಕ್ತಿ ಮತ್ತು ನಾಯಕತ್ವ ಎಂಬ ವಿಷಯದ ಬಗ್ಗೆ ಮಾತನಾಡುತ್ತಾ, ತಾವು ಸ್ಕೌಟ್





ಆಗಿದ್ದಾಗಿನ ಬಾಲ್ಯದ ಅನುಭವ, ಶಿಕ್ಷಣದ ಮಹತ್ವ, ಶಿಸ್ತು, ಸಮಯಪ್ರಜ್ಞೆ, ಜವಾಬ್ದಾರಿ, ಕರ್ತವ್ಯ ನಿರ್ವಹಣೆ, ಪ್ರಾಮಾಣಿಕತೆ, ಮುಂತಾದ ವಿಷಯಗಳ ಬಗ್ಗೆ ತಮ್ಮ ಸ್ವಂತ ಅನುಭವಗಳನ್ನು ಅತ್ಯಂತ ಮಕ್ಕಳ ಮನಕ್ಕೆ ತಲುಪುವಂತೆ ಭಾಷಣ ನೀಡಿ, ಮಕ್ಕಳ ಮತ್ತು ಅತಿಥಿಗಳ ಮೆಚ್ಚುಗೆಯನ್ನು ಪಡೆದರು.

ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರವರು ಮಾತನಾಡುತ್ತಾ, ಬೇಡನ್ ಪೋವೆಲ್‌ರವರ ಸೈದ್ಧಾಂತಿಕ ತತ್ವಗಳು, ಸ್ಕೌಟಿಂಗ್‌ಗಾಗಿ ಅವರು ನೀಡಿದ ಕೊಡುಗೆ, ಕರ್ನಾಟಕದ ಸ್ಕೌಟ್ಸ್ / ಗೈಡ್ ಚಟುವಟಿಕೆಗಳು, ನಾಯಕರುಗಳು ಪಾಲಿಸಬೇಕಾದ ಅಂಶಗಳ ಬಗ್ಗೆ ಉತ್ತಮವಾದ ಭಾಷಣವನ್ನು ನೀಡಿದರು.



ಮಧ್ಯಾಹ್ನದ ಅವಧಿಯಲ್ಲಿ ಸ್ಕೌಟ್/ ಗೈಡ್ ಸಂಸ್ಥೆಯ ಪ್ರತಿಜ್ಞೆಯನ್ನು ಪುನರುಚ್ಚರಿಸಿ ಪ್ರತಿಜ್ಞೆಯ ಮಹತ್ವವನ್ನು ಶ್ರೀಮತಿ ಗೀತಾನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್) ಇವರು ಮಕ್ಕಳಿಗೆ ತಿಳಿಸಿದರು. **ಡಾ॥ ಸಹನ ಜಿ.ವಿ., ನೇತ್ರತಜ್ಞರು, ಪಾರ್ವತಿ ನೇತ್ರಾಲಯ, ಬೆಂಗಳೂರು** ಇವರು 'ಮಹಿಳಾ ಸಮಾನತೆ ಮತ್ತು ಸಬಲೀಕರಣ' ಎಂಬ ವಿಷಯದ ಬಗ್ಗೆ ತಮ್ಮ ಅನುಭವದ ಅನುಕರಣೀಯ ವಿಷಯಗಳನ್ನು ವಿಶೇಷವಾಗಿ ಉಪನ್ಯಾನದ ಮೂಲಕ ಹೆಣ್ಣುಮಕ್ಕಳಿಗೆ ಮಾರ್ಗದರ್ಶನ ನೀಡಿದರು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಇವರು ಸಮಾರೋಪ ಸಮಾರಂಭದ ಅಧ್ಯಕ್ಷೀಯ ಭಾಷಣದಲ್ಲಿ ವಿಶ್ವಸ್ಕೌಟ್ ದಿನದಂದು ಮಕ್ಕಳು ಪಾಲಿಸಬೇಕಾದ ಅಂಶಗಳನ್ನು, ಆದರ್ಶ ನಾಗರೀಕರಾಗಿ ಬಾಳಲು ಅವಶ್ಯಕವಿರುವ ಅಂಶಗಳ ಬಗ್ಗೆ ಗಮನನೀಡಲು ಮಕ್ಕಳಿಗೆ ತಿಳಿಸಿದರು.

ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಕಾರ್ಯದರ್ಶಿಗಳು, ನಾಯಕತ್ವದ ಮಹತ್ವ ಮತ್ತು ಗುಣಗಳ ಬಗ್ಗೆ ವಿಶೇಷ ಮಾತುಗಳನ್ನು ಸಭಿಕರಿಗೆ ತಿಳಿಸಿದರು. ವೇದಿಕೆಯಲ್ಲಿ ಶ್ರೀಮತಿ ಬಿ.ವಿ.ರಾಮಲತಾ, ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್ಸ್)ರವರು, ಶ್ರೀಮತಿ ಜೀವರತ್ನ ಬಿಸನೀರ್, ರಾಜ್ಯ ಕೇಂದ್ರ ಕಛೇರಿಯ ಸಹಾಯಕ ರಾಜ್ಯ ಆಯುಕ್ತರು ಮತ್ತು ಕೇಂದ್ರ ಸ್ಥಾನಿಕ ಆಯುಕ್ತರುಗಳು ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದು, ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

ಶ್ರೀಮತಿ ಬಿ.ಡಿ. ಶಾಂತ, ಶ್ರೀಮತಿ ಎನ್.ಕೆ.ಛಾಯಾ, ಶ್ರೀಮತಿ ಬಿ.ವಿ. ರಾಮಲತಾ, ಶ್ರೀ ಸಿ.ಪಿ. ಪರಮೇಶ್ವರ ಶ್ರೀಮತಿ ರಾಧ ವೆಂಕಟೇಶ್, ಶ್ರೀಮತಿ ಅರುಣಮಾಲಾ, ಶ್ರೀಮತಿ ಕಮಲಾಕ್ಷಿ ಹೆಗಡೆ, ಶ್ರೀಮತಿ ಜ್ಯೋತಿ ಮತ್ತು ಸ್ಕೌಟರ್ಸ್ / ಗೈಡರ್ಸ್‌ಗಳೆಲ್ಲರೂ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸೇವೆ ಸಲ್ಲಿಸಿದರು.

ವರದಿ: **ಸಿ. ಮಂಜುಳಾ**

ರಾಜ್ಯ ಸಂಘಟನಾ ಆಯುಕ್ತರು(ಗೈಡ್ಸ್)





# Final Letter to the Scouts

## FROM LORD BADEN-POWELL FONDER OF THE MOVEMENT



At the 5th World Scout Jamboree held in 1937, Baden-Powell gave his farewell to Scouting and retired from public Scouting Life on 22 February, the joint birthday of Robert and Olave Baden-Powell, continues to be marked as "Founder's Day" by Scouts and "Thinking Day" by Guides to remember and celebrate the work of the Chief Scout and Chief Guide of the World.

**In his Final letter to the Scouts Baden - Powell wrote :**

I have had a most happy life and I want each one of you to have a happy life too. I believe that God put us in this jolly world to be happy and enjoy life. Happiness does not come from being rich, nor merely being successful in your career, nor by self indulgence. One step towards happiness is to make yourself healthy and strong while your are a boy, so that you can be useful and so you can enjoy life when you are a man. Nature study will show you how full of beautiful and wonderful things God has made the world for your to enjoy. Be contented with what you have got and make the best of it. Look on the bright side of things instead of the gloomy one. But the real way to get happines is by giving out happines to other people. Try and leave this world a little better than you found it and when your turn comes to die, you can die happy in feeling that at any rate you have not wasted your time but have done your best. "Be prepared" in this way, to live happy and to die happy - stick to your Scout Promise Always - even after you have ceased to be a boy - God help you to dos it.

Collection by
**B.S. Ravindra**



ಕರ್ನಾಟಕ ಸರ್ಕಾರ

ಸಂ: ಗ್ರಾಅಪ 354 ಜಿಪಸ 2018

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:04-12-2018.

## ಸುತ್ತೋಲೆ

**ವಿಷಯ:** ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ರಾಜ್ಯದ ಪ್ರತಿ ಜಿಲ್ಲೆ, ತಾಲ್ಲೂಕು ಹಾಗೂ ಗ್ರಾಮಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ಶಾಲಾ ಮಕ್ಕಳಿಗಾಗಿ ನಡೆಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಸುತ್ತೋಲೆ ಸಂಖ್ಯೆ:ಗ್ರಾಅಪ 35 ತಾಪಸ 2011, ದಿನಾಂಕ:14-07-2011.
2. ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ:BSG/SHQ/ ಜಿ.ಪಂ.ಅನು-01/2018-19/1507, ದಿನಾಂಕ:03-09-2018.

*****

ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಉಲ್ಲೇಖ (1)ರ ಸರ್ಕಾರದ ಸುತ್ತೋಲೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮ ಪಂಚಾಯಿತಿಗಳು ತಮ್ಮ-ತಮ್ಮ ಸ್ವಂತ ಸಂಪನ್ಮೂಲಗಳಿಂದ ಅನುಕ್ರಮವಾಗಿ ರೂ.25,000/-, 5,000/-, 2000/- ರೂಪಾಯಿಗಳನ್ನು 2011-12ನೇ ಸಾಲಿಗೆ ಮಾತ್ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 191, 213(2) ಮತ್ತು (3) ಮತ್ತು 219(1)(2) ರನ್ವಯ ಆಯಾ ಜಿಲ್ಲೆಗಳ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳಿಗೆ ಹಾಗೂ ತಾಲ್ಲೂಕಿನಲ್ಲಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳಿಗೆ ವಾರ್ಷಿಕ ವಂತಿಕೆಯನ್ನು ನೀಡುವಂತೆ ಸೂಚಿಸಲಾಗಿತ್ತು.

ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಸ್ಥೆಯು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ವತಿಯಿಂದ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳ ಯಶಸ್ವಿ ನಿರ್ವಹಣೆಗೆ ಅನುದಾನವು ಅಗತ್ಯವಾಗಿರುತ್ತದೆ. ಆದುದರಿಂದ ಆಯಾ ಜಿಲ್ಲಾ/ತಾಲ್ಲೂಕು/ಸ್ಥಳೀಯ ಸ್ಕೌಡ್ಸ್ ಮತ್ತು ಗೈಡ್ಸ್ ಸಂಸ್ಥೆಗಳಿಗೆ ಪ್ರತಿ ವರ್ಷ ವಾರ್ಷಿಕ ವಂತಿಕೆಯನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ರಾಜ್ಯದ ಪ್ರತಿ ಜಿಲ್ಲೆ, ತಾಲ್ಲೂಕು ಹಾಗೂ ಗ್ರಾಮಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ಶಾಲಾ ಮಕ್ಕಳಿಗಾಗಿ ವ್ಯಾಪಕವಾಗಿ ಹೆಚ್ಚಿಸಲು ಅನುಕೂಲವಾಗುವಂತೆ, ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 227, 219 ಮತ್ತು 213 ರನ್ವಯ

ಅನುಕ್ರಮವಾಗಿ ರಾಜ್ಯದ ಎಲ್ಲಾ ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮ ಪಂಚಾಯಿತಿಗಳು ತಮ್ಮ-ತಮ್ಮ ಸ್ವಂತ ಸಂಪನ್ಮೂಲಗಳಿಂದ ಆಯಾಯ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲೆ/ತಾಲ್ಲೂಕು/ಸ್ಥಳೀಯ ಸಂಸ್ಥೆಗಳಿಗೆ ಈ ಕೆಳಗೆ ನಮೂದಿಸಿರುವಂತೆ ವಾರ್ಷಿಕ ವಂತಿಕೆಯನ್ನು ನೀಡುವಂತೆ ತಿಳಿಸಲಾಗಿದೆ.

| ಕ್ರಮ ಸಂಖ್ಯೆ | ಪಂಚಾಯತಿಗಳ ವಿವರ | ಅನುದಾನದ ಮೊತ್ತ |
|---|---|---|
| 1. | ಜಿಲ್ಲಾ ಪಂಚಾಯಿತಿ | 50,000 |
| 2. | ತಾಲ್ಲೂಕು ಪಂಚಾಯಿತಿ | 10,000 |
| 3. | ಗ್ರಾಮ ಪಂಚಾಯಿತಿ | 5,000 |

(ವಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ(ಜಿ.ಪಂ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ಇವರಿಗೆ,**

1. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್.
2. ರಾಜ್ಯದ ಎಲ್ಲಾ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ (ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಇವರ ಮುಖಾಂತರ).
3. ರಾಜ್ಯದ ಎಲ್ಲಾ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು, (ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಇವರ ಮುಖಾಂತರ).

**ಪ್ರತಿಯನ್ನು ಮಾಹಿತಿಗಾಗಿ:**

1. ಶ್ರೀ. ಪಿ.ಜಿ. ಆರ್ ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್, ಕರ್ನಾಟಕ, ಸ್ಟೇಟ್ ಹೆಡ್ ಕ್ವಾರ್ಟರ್ಸ್, ನಂ.39, ಶಾಂತಿ ಗೃಹ, ಪ್ಯಾಲೇಸ್ ರೋಡ್, ಬೆಂಗಳೂರು-560001.
2. ಮಾನ್ಯ ಗ್ರಾಮೀಣಾಭಿವೃದ್ಧಿ ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳ ಮಾಹಿತಿಗಾಗಿ.(ಮಾನ್ಯ ಸಚಿವರ ಆದ್ಯ ಗಮನಕ್ಕೆ ತರುವಂತೆ ಕೋರಿದೆ.)
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ಆಪ್ತ ಕಾರ್ಯದರ್ಶಿಗಳ ಮಾಹಿತಿಗಾಗಿ.

ಸೂಚನೆ : ಮೇಲ್ಕಂಡ ಸುತ್ತೋಲೆಯ ಮೂಲಕ ಸಂಬಂಧಪಟ್ಟ ಎಲ್ಲಾ ಜಿಲ್ಲಾ ಪಂಚಾಯತಿ ಅಧ್ಯಕ್ಷರು, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ತಾಲ್ಲೂಕು ಪಂಚಾಯತಿ ಅಧ್ಯಕ್ಷರು, ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಗ್ರಾಮ ಪಂಚಾಯತಿ ಅಧ್ಯಕ್ಷರುಗಳಿಗೆ ರಾಜ್ಯ ಮುಖ್ಯ ಆಯುಕ್ತರು ಪತ್ರ ಬರೆಯಲಾಗಿದ್ದು, ಇದನ್ನು ನಮ್ಮ ಮತ್ತು ಜಿಲ್ಲಾ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಈ ಬಗ್ಗೆ ಸೂಕ್ತ ಕ್ರಮಕೈಗೊಂಡು ಹಣವನ್ನು ಸಂಗ್ರಹಿಸಿ ವಿವರವಾದ ಮಾಹಿತಿಯನ್ನು ಕೇಂದ್ರ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

– ರಾಜ್ಯ ಕಾರ್ಯದರ್ಶಿ







# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

## ರಾಜ್ಯ ಸಂಸ್ಥೆಯು ದಿನಾಂಕ 14-02-2019ರಂದು

## ಕಾಶ್ಮೀರದ ಪುಲ್ವಾಮದಲ್ಲಿ

## ಉಗ್ರರದಾಳಿಗೆ ಹುತಾತ್ಮರಾದ ಯೋಧರಿಗೆ

## ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

- ರಾಜ್ಯ ಕಾರ್ಯದರ್ಶಿ






My notion of democracy is that under it the weakest should have the same opportunity as the strongest.
- Mahatma Gandhi

# Wish you all Very Happy 70th Republic day



Justice is another name of liberty, equality and fraternity
- Dr. B. R. Ambedkar

**Farmers loan waiver**
Crop loan waiver to benefit more than 40 lakh farmers

**Badavara Bandhu to avoid exploitation**
Interest free loan upto Rs.10,000/- for registered street vendors

**Compete with China**
Industrial clusters to come up in 9 districts to create jobs

**Chief Minister's Matrushree**
Care for mother-child health. Monthly Rs. 1,000/- aid to poor women for three months before and after delivery

**Facelift to Namma Bengaluru**
Peripheral ring road, Elevated Corridor, Namma Metro, Sub-urban rail for smooth traffic flow. Priority to rejuvenate lakes

**Providing secured life to the vulnerable**
Pension amount enhanced for senior citizens and specially abled

**Empowerment through education**
Rs. 1200 crore for infrastructure development of Government schools and colleges

JAYA BHARATA JANANIYA TANUJATE
JAYA HEY KARNATAKA MATE



Sri H.D. Kumaraswamy
Hon'ble Chief Minister



Dr. G. Parameshwara
Hon'ble Deputy Chief Minister







To abide by the Constitution and respect its ideals and institutions, the National Flag and the National Anthem, as enshrined in our Constitution, is the fundamental duty of every citizen of the country.

Karnataka - The Land of peaceful co-existence, growth and development

Karnataka Information



# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ಜನವರಿ 12 ರಂದು ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆಯನ್ನು ಜಿಲ್ಲಾ ಸಂಸ್ಥೆಯಲ್ಲಿ ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಬಳ್ಳಾರಿ ನಗರದ 100 ಕ್ಕೂ ಹೆಚ್ಚು ಕಬ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.




ಸ್ವಾಮಿ ವಿವೇಕಾನಂದರ ಭಾವಚಿತ್ರಕ್ಕೆ ಪೂಜೆ ಸಲ್ಲಿಸಿ, ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ॥ ಕೆ. ವೀರೇಶ್, ಜಿಲ್ಲಾ ಸ್ಕೌಟ್ ಆಯುಕ್ತರು, ವಹಿಸಿಕೊಂಡು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಮುಖ್ಯ ಅತಿಥಿಗಳಾಗಿ ಶ್ರೀ ವಿಜಯಸಿಂಹ, ಕಾರ್ಯದರ್ಶಿಗಳು, ಶ್ರೀ ಪ್ರಭಾಕರ್, ಖಜಾಂಚಿ, ಶ್ರೀ ಎಂ.ಟಿ. ಮಲ್ಲೇಶ್, ಉಪಾಧ್ಯಕ್ಷರು, ನಿವೃತ್ತ ಪ್ರಾಚಾರ್ಯರಾದ ಶ್ರೀ ವಿ.ಎಂ. ರಾಜಶೇಖರ್, ಶ್ರೀ ಕೊಟ್ಟೂರುಸ್ವಾಮಿ ಬಿ.ಇಡಿ ಕಾಲೇಜು, ವಿ.ವಿ. ಸಂಘ ಬಳ್ಳಾರಿ, ಶ್ರೀ ಎಂ. ನಾಗರಾಜ, ಡಿ.ಓ.ಸಿ. ಶ್ರೀ ಚಂದ್ರಯ್ಯ ಮಠದ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಹಾಗೂ ಗೈಡ್ ಕ್ಯಾಪ್ಟನ್‌ಗಳು, ಸ್ಕೌಟ್ ಮಾಸ್ಟರ್‌ಗಳು ಭಾಗವಹಿಸಿದ್ದರು.

ನಿವೃತ್ತ ಪ್ರಾಚಾರ್ಯರಾದ ಶ್ರೀ ವಿ.ಎಂ. ರಾಜಶೇಖರ್ ರವರು ಸ್ವಾಮಿ ವಿವೇಕಾನಂದರು ಅಮೇರಿಕಾದ ಚಿಕಾಗೋ ನಗರದಲ್ಲಿ ತಮ್ಮ ಭಾಷಣದಿಂದ ಇಡೀ ವಿಶ್ವವೇ ಬೆರಗಾಗುವಂತೆ ಭಾಷಣವನ್ನು ಮಾಡಿ, ಜಗತ್ಪ್ರಸಿದ್ಧಿಯನ್ನು ಪಡೆದು ಭಾರತದ ಕೀರ್ತಿಯನ್ನು ಎತ್ತಿ ಹಿಡಿದಿದ್ದಾರೆ ಎಂದು ತಿಳಿಸಿದರು.

ಡಾ॥ ಕೆ. ವೀರೇಶರವರು ಸ್ವಾಮಿ ವಿವೇಕಾನಂದರವರ ತತ್ವಗಳನ್ನು ಅನುಸರಿಸಿ, ಸದೃಢ ದೇಶವನ್ನು ಕಟ್ಟುವ ಹಾಗೂ ವಿಶ್ವಗುರು ಆಗಿಸುವ ದೃಢ ಸಂಕಲ್ಪವನ್ನು ಮಾಡುವ ಅವಶ್ಯಕತೆ ಇದೆ ಎಂದು ತಿಳಿಸಿದರು.

ಸ್ವಾಗತ ಮತ್ತು ನಿರೂಪಣೆಯನ್ನು ಶ್ರೀ ಎಂ. ನಾಗರಾಜ, ಜಿಲ್ಲಾ ಸಂಘಟನಾ ಆಯುಕ್ತರು, ಜಿಲ್ಲಾ ಸಂಸ್ಥೆ, ಬಳ್ಳಾರಿ ನಿರ್ವಹಿಸಿದರು. ವಂದನಾರ್ಪಣೆಯನ್ನು ಶ್ರೀ ಚಂದ್ರಯ್ಯ ಮಠದ್, ಬಳ್ಳಾರಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ, ನೆರವೇರಿಸಿದರು.

* ಜನವರಿ 18 ರಿಂದ 20 ರ ವರೆಗೆ ಜಿಲ್ಲಾ ಮಟ್ಟದ ತೃತೀಯ ಸೋಪಾನ ಶಿಬಿರವನ್ನು ಜಿಂದಾಲ್ ಆದರ್ಶ ವಿದ್ಯಾಲಯ, ತೋರಣಗಲ್ಲು ಇಲ್ಲಿ ಆಯೋಜಿಸಲಾಗಿತ್ತು.

ಈ ಶಿಬಿರದಲ್ಲಿ 166 ಸ್ಕೌಟ್ಸ್, 144 ಗೈಡ್ಸ್, 25 ಸ್ಕೌಟರ್/ಗೈಡರ್‌ಗಳು ಭಾಗವಹಿಸಿದ್ದರು. ಶಿಬಿರದ ಕಾರ್ಯಕ್ರಮವನ್ನು ಕಾಲೇಜಿನ ಪ್ರಾಚಾರ್ಯರಾದ ಡಾ॥ ಥಾಮಸ್ ರೆಮಿಜಿಯುಸ್ ರವರು ದೀಪವನ್ನು ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.



ಈ ಕಾರ್ಯಕ್ರಮದಲ್ಲಿ ಶ್ರೀ ವಿಜಯಸಿಂಹ, ಕಾರ್ಯದರ್ಶಿಗಳು, ಶ್ರೀ ಪ್ರಭಾಕರ, ಖಜಾಂಚಿಗಳು. ಶ್ರೀ ನವಾಜ್, ಶ್ರೀಮತಿ ಮಲ್ಲೇಶ್ವರಿ ಜುಜಾರೆ ಎ.ಎಸ್.ಓ.ಸಿ. ಶ್ರೀ ಎಂ. ನಾಗರಾಜ ಡಿ.ಓ.ಸಿ. ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀಮತಿ ಜಯಶ್ರೀ ಜೋಷಿ ಹಾಗೂ ಶ್ರೀ ನಟರಾಜ್ ವಹಿಸಿಕೊಂಡಿದ್ದರು.

ಜನವರಿ 18 ರಂದು ಸಾಯಂಕಾಲ ಶಿಭಿರಾಗ್ನಿ ಕಾರ್ಯಕ್ರಮಕ್ಕೆ ಡಾ॥ ಕೆ.ವೀರೇಶ್, ಜಿಲ್ಲಾ ಆಯುಕ್ತರು(ಸ್ಕೌ) ರವರು ಭೇಟಿ ನೀಡಿ ಸೂಕ್ತ ಸಲಹೆ ಮಾರ್ಗದರ್ಶನ ನೀಡಿದರು.

ಜನವರಿ 19 ರಂದು ಸಂಡೂರು ತಾಲ್ಲೂಕು ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಐ.ಆರ್. ಹಕ್ಕಿರವರು ಹಾಗೂ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಸೋಮಪ್ಪ ರವರು ಭೇಟಿ ನೀಡಿದರು.

ಜನವರಿ 20 ರಂದು ಮುಕ್ತಾಯ ಸಮಾರಂಭ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಮುಖ್ಯ ಅತಿಥಿಗಳಾಗಿ ತೋರಣಗಲ್ಲು ಪೊಲೀಸ್ ಠಾಣೆಯ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಆದ ಶ್ರೀಮಹಮ್ಮದ್ ರಫೀಕ್ ರವರು ಭಾಗವಹಿಸಿ ಆಂಬುಲೆನ್ಸ್ ಮತ್ತು ಪ್ರಥಮ ಚಿಕಿತ್ಸೆಯ ಬಗ್ಗೆ ಉತ್ತಮ ಮಾರ್ಗದರ್ಶನವನ್ನು ಮಕ್ಕಳಿಗೆ ನೀಡಿದರು.

* ಕೂಡ್ಲಗಿಯಲ್ಲಿ ಮಹಾತ್ಮಾ ಗಾಂಧೀಜಿಯವರ ಪ್ರತಿಮೆಯ ಬಳಿ ಅವರ ಚಿತಾಭಸ್ಮವಿರುವಲ್ಲಿ ಜನವರಿ 30ರಂದು ಹುತಾತ್ಮರ ದಿನಾಚರಣೆಯನ್ನು ಆಚರಿಸಲಾಯಿತು. 20 ಸ್ಕೌಟ್‌ಗಳು, 20 ಗೈಡ್‌ಗಳು 10 ಸ್ಕೌಟರ್‌ಗಳು ಮತ್ತು 5 ಗೈಡರ್‌ಗಳು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಸ್ಕೌಟರ್‌ಗಳು ರಕ್ತದಾನವನ್ನು ಸಹ ಮಾಡಿದರು.



## ಬೆಳಗಾವಿ

ಫೆಬ್ರವರಿ 2 ರಂದು ಗೋಕಾಕ ತಾಲೂಕಾ ಆರೋಗ್ಯ ಅಧಿಕಾರಿಗಳ ಕಾರ್ಯಾಲಯ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಂಯುಕ್ತ ಆಶ್ರಯದಲ್ಲಿ ಹಮ್ಮಿಕೊಳ್ಳಲಾದ 'ಜಂತುಹುಳು ನಿವಾರಣಾ' ದಿನಾಚರಣೆಯಲ್ಲಿ ಕೆ.ಎಲ್.ಇ. ಮಹದೇವಪ್ಪಣ್ಣಾ ಮುನವಳ್ಳಿ ಶಾಲೆಯ "ಶ್ರೀ ಬಸವೇಶ್ವರ ಸ್ಕೌಟ್ ತಂಡ" ಮತ್ತು 'ಫ್ಲೋರೆನ್ಸ್ ನೈಟಿಂಗೇಲ್' ತಂಡ ಭಾಗವಹಿಸಿದ್ದವು.

ವಿದ್ಯಾರ್ಥಿಗಳು ನಗರದ ಪ್ರಮುಖ ಬೀದಿಗಳಲ್ಲಿ ಸಂಚರಿಸುತ್ತಾ, ಜಂತುಹುಳುಗಳು ಹೇಗೆ ಹರಡುತ್ತವೆ? ಹರಡಿದರೆ ನಿವಾರಣೆ ಹೇಗೆ? ರಕ್ತಹೀನತೆಯಿಂದಾಗುವ ತೊಂದರೆಗಳು ಯಾವುವು, ಪೌಷ್ಠಿಕಾಂಶಗಳ ಅಗತ್ಯತೆ ಮುಂತಾದ ಸಂಗತಿಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸುವ ಪ್ರಯತ್ನ ಮಾಡಿದರು.

ತಾಲ್ಲೂಕು ವೈದ್ಯಾಧಿಕಾರಿಗಳಾದ ಶ್ರೀ ಆರ್.ಎಸ್. ಬೆಣಚಣಮರಡಿ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಬಿ. ಬಳಗಾರ, ಪ್ರಾಚಾರ್ಯರಾದ ಶ್ರೀಮತಿ ಅನು ಕೌಶಿಕ್, ಸ್ಕೌಟ್ ಮಾಸ್ಟರ್ ಶ್ರೀ ಪಿ.ವಾ. ಪಾಟೀಲ, ಗೈಡ್ ಕ್ಯಾಪ್ಟನ್ ಶ್ರೀಮತಿ ಸುಜಾತಾ ತೊಂಡಿಕಟ್ಟಿ, ಕಬ್ ಕ್ಯಾಪ್ಟನ್ ಶ್ರೀಮತಿ ಚೇತನಾ ಪಾಟೀಲ, ಫ್ಲಾಕ್ ಲೀಡರ್ ಶ್ರೀಮತಿ ನಂದಾದೀಪಾ ಶಿರಾಳಕರ್ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

## Bengaluru North

The Shivajinagar Local Association Conducted Annual Rally on 12th January 2019 in Good Will Girls High School. The Chief guest of the function was Smt. Jayashree, Principal, Stracey Memorial School. 225 Cubs, Bulbuls, Scouts-Guides from different Schools Participated in the rally.

Sri T.S. Lucas, LT(S) participated and gave required inputs to all the participants. The following were the programme leaders. Smt. Parimala, for Cubs, Mr. Sandeep for Scouts. Smt. B. Revathy, LT (B) for Bulbuls, Smt. Kala (HWB) for Guides.

## Bengaluru South

* Vijayanagar Local Association conducted Anual Rally on 7-2-2019 at Sri Jnanakshi Vidyaniketan School. 71 Cubs, 41 Bulbuls, 458 Scouts, 308 Guides, 03 Rovers, 04 Rangers, 39 Unit Leaders participated in the Rally. Paramapujya Sri Sri Jayendrapuri Mahaswamiji, Sri P.G.R. Sindhia, State Chief Commissioner, Sri Kondajji B. Shanmukhappa, Vice President, Sri Hayagreevachar, Secretary of Jnanakshi Vidyaniketan, Sri M.K. Khan, DCC, Sri P. Palani. DC(S), District Secretary Sri M. S. Satheesh, Principal Smt. Jayalakshmi Prakash and all the office Bearers of Bangalore South District Association were the Chief Guests of the valedictory programme. Activities included Marchpast, Improvised shelter, flag staff construction, prayer and flag song, pioneering cooking without fire, cartoon mask, quiz, Sri A. S. Madhusudan conducted Massenger of Peace Activity for all the participants.

## ಚಿತ್ರದುರ್ಗ

ಜನವರಿ 26ರಂದು ಜಿಲ್ಲಾ ಸಂಸ್ಥೆಯಲ್ಲಿ ಪೂಜ್ಯ ಮಹಾತ್ಮ ಗಾಂಧೀಜಿರವರ ಮತ್ತು ಡಾ॥ ಬಿ.ಆರ್. ಅಂಬೇಡ್ಕರ್‌ರವರ ಭಾವಚಿತ್ರಕ್ಕೆ ಪೂಜೆ ಸಲ್ಲಿಸುವುದರೊಂದಿಗೆ 70ನೇ ಗಣರಾಜ್ಯೋತ್ಸವ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್, ಜಿಲ್ಲಾ ಆಯುಕ್ತರು (ಗೈಡ್ಸ್) ರವರು ರಾಷ್ಟ್ರಧ್ವಜಾರೋಹಣ ಮಾಡಿದರು. ನಂತರ ಗಣರಾಜ್ಯೋತ್ಸವ ದಿನಾಚರಣೆ ಕುರಿತು ಮಾತನಾಡಿದರು.




* ಫೆಬ್ರವರಿ 2 ರಂದು ಚಿತ್ರದುರ್ಗ ತಾಲ್ಲೂಕಿನ ಭರಮಸಾಗರ ಗ್ರಾಮದ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಇಲ್ಲಿ ನೂತನ ಸ್ಕೌಟ್ಸ್ ಘಟಕದ ಉದ್ಘಾಟನಾ ಸಮಾರಂಭವನ್ನು ಆಯೋಜಿಸಲಾಗಿತ್ತು. ಜಿಲ್ಲಾ ಮುಖ್ಯ ಆಯುಕ್ತರಾದ ಮಾನ್ಯ ಶ್ರೀ ಎಂ. ರೇವಣಸಿದ್ದಪ್ಪನವರು ಜ್ಯೋತಿ ಬೆಳಗುವುದರ ಮೂಲಕ



ಘಟಕದ ಉದ್ಘಾಟನೆಯನ್ನು ನೆರವೇರಿಸಿದರು. ಸಮಾರಂಭದಲ್ಲಿ ಪ್ರಾಸ್ತಾವಿಕವಾಗಿ ಚಿತ್ರದುರ್ಗ ಸ್ಥಳಿಯ ಸಂಸ್ಥೆಯ ಕಾರ್ಯದರ್ಶಿಯಾದ ಶ್ರೀ ಪಿ.ವೈ. ದೇವರಾಜ್ ಪ್ರಸಾದ್‌ರವರು ಮಾತನಾಡಿದರು. ಸಮಾರಂಭದಲ್ಲಿ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಮಹೇಶ್‌ರವರು ವಹಿಸಿದ್ದರು.



## ಚಿಕ್ಕಮಗಳೂರು

ಫೆಬ್ರವರಿ 22ರಂದು ಭಯೋತ್ಪಾದಕರ ದಾಳಿಗೆ ಹುತಾತ್ಮರಾದ ದೀರ ಯೋದರಿಗೆ ಶ್ರದ್ಧಾಂಜಲಿ ಅರ್ಪಿಸುವುದರೊಂದಿಗೆ ಸ್ಕೌಟಿಂಗ್ ಸಂಸ್ಥಾಪಕರ ದಿನಾಚರಣೆ ಮತ್ತು ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಎನ್. ಮಹೇಶ್ ರವರು ಸಂಸ್ಥಾಪಕರ ದಿನಾಚರಣೆ ಕೇವಲ ಆಚರಣೆಯಾಗದೆ ಜೀವನದಲ್ಲಿ ಅಳವಡಿಸಿಕೊಳ್ಳುವಂತಿರಬೇಕು ಎಂದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿಯವರು ಅಧ್ಯಕ್ಷತೆಯ ಭಾಷಣದಲ್ಲಿ ಇಂದು ನಾವು ಸಂಸ್ಥಾಪಕರ ದಿನಾಚರಣೆಯೊಂದಿಗೆ ಚಿಂತನಾ ದಿನಾಚರಣೆಯನ್ನು ಆಚರಿಸುತ್ತಿದ್ದೇವೆ. ಅಂದರೆ ನಾವು ಹಿರಿಯರ, ತಂದೆ–ತಾಯಿಯರ, ಪೋಷಕರ ಕಾಳಜಿ ಮತ್ತು ತ್ಯಾಗಗಳನ್ನು 2ನೇ ನಿಯಮದ ಪ್ರಕಾರ ನಡೆದುಕೊಳ್ಳಬೇಕು. ಸ್ವಚ್ಛ ಭಾರತ್, ಪರಿಸರ ಕಾಳಜಿ, ಸಮಾಜವನ್ನು ತಿದ್ದುವ ಕೆಲಸವಾಗಬೇಕು ಎಂದರು.

ಶ್ರೀ ರಾಘವೇಂದ್ರ, ಖಜಾಂಚಿ, ಸ್ಥಳೀಯ ಸಂಸ್ಥೆ, ಚಿಕ್ಕಮಗಳೂರು ಬಿ.ಪಿ.ಯವರ ಜನ್ಮ ಚರಿತ್ರೆಯನ್ನು ತಿಳಿಸಿದರು. ಪ್ರಾಸ್ತಾವಿಕ ನುಡಿಯನ್ನು ಶ್ರೀ ನಂದಕುಮಾರ್, ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ, ಚಿಕ್ಕಮಗಳೂರು ಶ್ರೀ ಕೆ.ಟಿ. ಮಲ್ಲೇಶಪ್ಪ ಜಿಲ್ಲಾ ಸಂಘಟಕರು ಇವರು ಎಲ್ಲರಿಗೂ ಪ್ರತಿಜ್ಞಾ ವಿಧಿಯನ್ನು ಬೋಧಿಸಿದರು.

ಶ್ರೀಮತಿ ಸಂಗೀತ, ಶ್ರೀ ಕಿರಣ್, ಶ್ರೀ ಕಿರಣ್ ಕುಮಾರ್ ಬಿ.ಎನ್. ಹಾಗೂ 200 ಸ್ಕೌಟ್ಸ್–ಗೈಡ್ಸ್ ಮತ್ತು ಕಬ್ಸ್–ಬುಲ್‌ಬುಲ್ಸ್‌ಗಳು ಹಾಜರಾಗಿದ್ದರು. ಶ್ರೀ ನಿರಂಜನ್ ರವರು ವಂದಿಸಿದರು.



## ಚಾಮರಾಜನಗರ

ಜನವರಿ 31 ರಿಂದ ಫೆಬ್ರವರಿ 6 ರ ವರೆಗೆ ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳವರ ಜಾತ್ರಾ ಮಹೋತ್ಸವ ಜರುಗಿತು ಶ್ರೀ ಕ್ಷೇತ್ರ ಸುತ್ತೂರಿನಲ್ಲಿ ಜೆ.ಎಸ್.ಎಸ್. ಮಹಿಳಾ ಪ್ರಥಮ ದರ್ಜೆ ಕಾಲೇಜಿನ ರೇಂಜರ್ಸ್‌ಗಳು ಸೇವೆ ಸಲ್ಲಿಸಿದರು.



ಜಿಲ್ಲಾ ಸಂಸ್ಥೆ ಚಾಮರಾಜನಗರ, ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಜಿಲ್ಲಾ ವಕೀಲರ ಸಂಘ ಮತ್ತು ಸರ್ಕಾರಿ ಪ್ರೌಢಶಾಲೆ ತಮ್ಮಡಳ್ಳಿ ಇವರ ಸಹಯೋಗದಲ್ಲಿ "ವಿದ್ಯಾರ್ಥಿಗಳಿಗೆ ಕಾನೂನು ಅರಿವು – ನೆರವು" ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟನೆ ಮಾಡಲಾಯಿತು. ಶ್ರೀಮತಿ ವಿಶಾಲಾಕ್ಷಿ ಸಿ.ಜಿ, ಸದಸ್ಯ ಕಾರ್ಯದರ್ಶಿಗಳು ಜಿಲ್ಲಾ ಕಾನೂನು ಸೇವೆ ಪ್ರಾಧಿಕಾರ, ಚಾಮರಾಜನಗರ ಇವರು ಮಕ್ಕಳಿಗೆ ಹಕ್ಕು ಮತ್ತು ಕರ್ತವ್ಯದ ಬಗ್ಗೆ, ಕಾನೂನು ಎಂದರೇನು, ಕಾನೂನು ಎಲ್ಲರಿಗೂ ಒಂದೇ ಎಂದು ಕಾನೂನಿನ ವಿಧಿಗಳ ಬಗ್ಗೆ ಹಾಗೂ ಯಾವ ಯಾವ ತಪ್ಪುಗಳಿಗೆ ಯಾವ ಯಾವ ಶಿಕ್ಷೆ ಇರುತ್ತದೆ ಎಂಬುದನ್ನು ಅರಿವು ಮೂಡಿಸಿದರು. ತಾಲ್ಲೂಕು ಕಾರ್ಯದರ್ಶಿಗಳಾದ ಶ್ರೀ ಸಿದ್ಧಲಿಮಗಮೂರ್ತಿರವರು ಮತ್ತು ಜಿಲ್ಲಾ ಸಂಘಟಕರಾದ ಶ್ರೀ ಅಶೋಕ್ ಕುಮಾರ್ ಕೆ.ಪಿ. ರವರು ಭಾಗವಹಿಸಿದ್ದರು.

ಫೆಬ್ರವರಿ 8 ರಂದು "ರಾಷ್ಟ್ರೀಯ ಜಂತು ಹುಳು ನಿವಾರಣಾ ದಿನ" ದಿನಾಚರಣೆಯ ಪ್ರಯುಕ್ತ ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ಶ್ರೀ ಚಾಮರಾಜೇಶ್ವರ ದೇವಾಲಯದಿಂದ ಜಿಲ್ಲಾ ಆಡಳಿತ ಭವನದವರೆಗೆ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಸರ್ಕಾರಿ ಮಹಿಳಾ ಪ್ರಥಮ ದರ್ಜೆ

ಕಾಲೇಜಿನ ರೇಂಜರ್ಸ್‌ಗಳು, ಜೆ.ಎಸ್.ಎಸ್. ಮಹಿಳಾ ಪ್ರಥಮ ದರ್ಜೆ ಕಾಲೇಜಿನ ರೇಂಜರ್ಸ್‌ಗಳು ಹಾಗೂ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಉಪ್ಪಾರ ಬೀದಿ ಶಾಲೆಯ ಸ್ಕೌಟ್-ಗೈಡ್‌ಗಳು ಸೆಂಟೆ ಜೋಸೆಫ್ ಶಾಲೆಯ 70 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.



ಜಿಲ್ಲಾ ಸಂಘಟಕರಾದ ಶ್ರೀ ಅಶೋಕ್ ಕುಮಾರ್ ರವರು ಹಾಜರಿದ್ದರು. ಎಲ್ಲಾ ಸ್ಥಳೀಯ ಸಂಸ್ಥೆಗಳು ಹಾಗೂ ಸ.ಹಿ.ಪ್ರಾ. ಶಾಲೆ ಬೇಗೂರು ಮೊರಾರ್ಜಿ ದೇಸಾಯಿ ವಸತಿ ಶಾಲೆ ತೆರಕಣಾಂಬಿ, ಸ.ಪ್ರೌ ಶಾಲೆ ಹುಂಡಿಪುರ, ಸ.ಪ್ರೌ ಶಲೆ ಕುರಟ್ಟಿ ಹೊಸೂರು, ಜೆ.ಎಸ್.ಎಸ್. ಪ್ರೌ ಶಾಲೆ ಅಜ್ಜಿಪುರ ಶಾಲೆಗಳಲ್ಲಿ ಆಚರಿಸಲಾಯಿತು.

* ಫೆಬ್ರವರಿ 15 ರಂದು ಜನರಿಗೆ ಮತದಾನದ ಜಾಗೃತಿ ಮೂಡಿಸುವ ಸಲುವಾಗಿ ಮಕ್ಕಳಿಗೆ ಚುನಾವಣಾ ಮಹತ್ವದ ಅರಿವು ಮೂಡಿಸಿ ನಂತರ ಬೀದಿಗಳಲ್ಲಿ ಹಾಗೂ ಮುಖ್ಯ ರಸ್ತೆಗಳಲ್ಲಿ ಮತದಾನ ಜಾಗೃತಿ ಜಾಥ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ಮತದಾರರ ಹೆಸರನ್ನು ಮತದಾರರ ಪಟ್ಟಿಯಲ್ಲಿ ಖಾತರಿಪಡಿಸಿಕೊಂಡು ಇಲ್ಲದಿದ್ದರೆ ಅರ್ಜಿ ಸಲ್ಲಿಸುವಂತೆ ಜಾಗೃತಿ ಮೂಡಿಸಲಾಯಿತು. ಈ ಕಾರ್ಯಕ್ರಮದಲ್ಲಿ ಜಿಲ್ಲೆಯ ಪದಾಧಿಕಾರಿಗಳು, ಸ್ಕೌಟ್-ಗೈಡ್ ಶಿಕ್ಷಕ-ಶಿಕ್ಷಕಿಯರು ಹಾಗೂ ಮಕ್ಕಳು ಭಾಗವಹಿಸಿದ್ದರು.



## ಗದಗ

ಫೆಬ್ರವರಿ 8ರಂದು ರೋಣ ಗಜೇಂದ್ರಗಡ ತಾಲ್ಲೂಕುಗಳ ರ‍್ಯಾಲಿಯನ್ನು ಜಿ.ಹೆಚ್.ಪಿ.ಎಸ್. ಮುಂಡರಗಿಯಲ್ಲಿ ನಡೆಸಲಾಯಿತು. ರ‍್ಯಾಲಿಗೆ ಚಾಲನೆಯನ್ನು ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ರಾಜು ಮಾಲಗತ್ತಿ ನೀಡಿದರು. ಈ ರ‍್ಯಾಲಿಯಲ್ಲಿ ಶೀ ಸೂಂಠಿ, ಶ್ರೀಕರಣಿ, ಶ್ರೀ ಹಟ್ಟುವಮನಿ, ಶ್ರೀ ಜಡಿದೆಲಿ, ಶಾಲೆಯ ಮುಖ್ಯೋಪಾಧ್ಯಾಯಕಿಯಾದ ಶ್ರೀಮತಿ ಗಜಕೋಶ, ಶಾಲೆಯ ಸಿಬ್ಬಂದಿ ಭಾಗವಹಿಸಿದ್ದರು.



* ಫೆಬ್ರವರಿ 13 ರಂದು ಗದಗ ಗ್ರಾಮೀಣ ಸ್ಥಳೀಯ ಸಂಸ್ಥೆ ಹರ್ತಿಗ್ರಾಮದ ಶ್ರೀ ಅಳ್ಯಾಳ ಸವಡಿ ಸರಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಜಂತುಹುಳು ನಿವಾರಣೆ ಬಗ್ಗೆ ಕಾರ್ಯಕ್ರಮವನ್ನು ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಶ್ರೀ ತೋಟಪ್ಪನ್ನವರ, ಶ್ರೀ ಎಂ.ಕೆ. ಜಕ್ಕಲಿ, ಶ್ರೀ ಕೆ.ಎಸ್. ಬಾಳೆಕಾಯಿ, ಶ್ರೀಮತಿ ದೇಶಿಹಳ್ಳಿ, ಶ್ರೀಮತಿ ಹೆರಕಲ್, ಶ್ರೀಮತಿ ಗುಂಜಾಳ ಹಾಗೂ ದವಾಖಾನೆಯ ಆರು ಕಾರ್ಯಕರ್ತರು, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಫೆಬ್ರವರಿ 8 ರಂದು ಶ್ರೀ ರಾಜು ಹಂಚಿನ ಮನಿ, ವೈದ್ಯಾಧಿಕಾರಿಗಳು ಜಂತುಹುಳು ನಿವಾರಣೆ, ಉತ್ಪತ್ತಿ ಬಗ್ಗೆ ತಿಳಿಸಿದರು.

* ಫೆಬ್ರವರಿ 8 ರಂದು ನರಗುಂದ ತಾಲ್ಲೂಕಾ ರ‍್ಯಾಲಿಯನ್ನು ಸ್ಕೌಟ್ಸ್-ಗೈಡ್ಸ್ ಗಳೊಂದಿಗೆ ಬಿ.ಆರ್.ಸಿ. ಆವರಣದಲ್ಲಿ ನಡೆಸಲಾಯಿತು. ರ‍್ಯಾಲಿಗೆ ಚಾಲನೆಯನ್ನು



ಶ್ರೀ ಅಂಕಲಿ ಮುಖ್ಯೋಪಾಧ್ಯಾಯರು ನೀಡಿದರು. ಶ್ರೀ ಎನ್.ಹೆಚ್. ಜಾಧವ, ಶ್ರೀ ಮುಲ್ಲಾ, ಶ್ರೀ ಹಾನಾಪುರ, ಶ್ರೀ ಶಿರಿಯಪ್ಪಗೌಡರು ತಾಲ್ಲೂಕಾ ಕಾರ್ಯದರ್ಶಿಹಾಗೂ ಸ್ಕೌಟ್ ಮಾಸ್ಟರ್‌ಗಳು ಹಾಗೂ ಗೈಡ್ ಕ್ಯಾಪ್ಟನ್ನವರುಗಳು ಭಾಗವಹಿಸಿದ್ದರು.

* ಫೆಬ್ರವರಿ 8 ರಂದು ರೋಣ ಮತ್ತು ಗಜೇಂದ್ರಗಡ ತಾಲ್ಲೂಕುಗಳ ದ್ವಿತೀಯ ಸೋಪಾನ್ ಹಾಗೂ ಪೆಟ್ರೋಲ ಲೀಡರ್ಸ್ ಶಿಬಿರವನ್ನು ಜಿ.ಹೆಚ್.ಪಿ.ಎಸ್. ಮುಶಿಗೇರಿಯಲ್ಲಿ ನಡೆಸಲಾಯಿತು.



ಶ್ರೀ ನಂಜುಂಡಯ್ಯ ಬಿ.ಇ.ಓ., ರೋಣರವರು ಮಾತನಾಡುತ್ತಾ ಈ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಈಗಿನ ಆಧುನಿಕ ಯುಗಕ್ಕೆ ಅತೀ ಅವಶ್ಯಕತೆಯಿದೆ ಹಾಗೂ ಇದು ವಿಶ್ವದಾದ್ಯಂತ ಹಬ್ಬಿದೆ. ಒಳ್ಳೆಯ ಮನೋಭಾವ ಮಾಡಿಸುತ್ತದೆ ಎಂದು ತಿಳಿಸಿದರು. ಸ್ಕೌಟ್ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದರು.

* ಫೆಬ್ರವರಿ 11 ರಿಂದ 13 ರ ವರೆಗೆ ಗದಗ ಗ್ರಾಮೀಣ ಸ್ಥಳೀಯ ಸಂಸ್ಥೆ ದ್ವಿತೀಯ ಸೋಪಾನ್ ಹಾಗೂ ಪೇಟ್ರೋಲ ಲೀಡರ್ಸ್ ಶಿಬಿರವನ್ನು ಶ್ರೀ ಬಸವೇಶ್ವರ ಕಲ್ಯಾಣ ಮಂಟಪ ಹರ್ಲೆಯಲ್ಲಿ ನಡೆಸಲಾಯಿತು. ಶ್ರೀ ರೆಡ್ಡೇರ, ಬಿ.ಇ.ಓ., ರವರು ಉದ್ಘಾಟಿಸಿದರು. ಸ್ಕೌಟ್ಸ್-ಗೈಡ್ಸ್, ಸ್ಕೌಟರ್ಸ್-ಗೈಡರ್ಸ್‌ಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು.

* ಫೆಬ್ರವರಿ 14 ಮತ್ತು 15 ರ ವರೆಗೆ ಮುಂಡರಗಿ ತಾಲ್ಲೂಕು ದ್ವಿತೀಯ ಸೋಪಾನ್, ಪೇಟ್ರೋಲ ಲೀಡರ್ಸ್ ಶಿಬಿರವನ್ನು ಸರಕಾರಿ ಮಾದರಿ ಶಾಸಕರ ಶಲೆ ಮುಂಡರಗಿಯಲ್ಲಿ ನಡೆಸಲಾಯಿತು.

ಅಧ್ಯಕ್ಷತೆ ಶ್ರೀ ಮಂಜುನಾಥ ಇಟಗಿ, ತಾಲ್ಲೂಕಾ ಕಾರ್ಯಾಧ್ಯಕ್ಷರು ವಹಿಸಿ ಮಾತನಾಡಿದರು ಶಿಬಿರ ನಾಯಕಿಯಾಗಿ ಶ್ರೀಮತಿ ಅನ್ನಪೂರ್ಣ ಯೊಳವಾರ ಕಾರ್ಯ ನಿರ್ವಹಿಸಿದರು.

* ಫೆಬ್ರವರಿ 7 ಮತ್ತು 8 ರ ವರೆಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ದ್ವಿತೀಯ ಸೋಪಾನ್ ಹಾಗೂ ಪೆಟ್ರೋಲ್ ಲೀಡರ್ಸ್ ಕ್ಯಾಂಪನ್ನು ನಡೆಸಲಾಯಿತು. ಉದ್ಘಾಟಕರಾಗಿ ಶ್ರೀ ಫಣಿಬಂದ, **BRC Co-ordinator** ನೆರವೇರಿಸಿ ಮಾತನಾಡಿದರು. ಈ ಶಿಬಿರವನ್ನು ನಡೆಸುವುದರಿಂದ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಒಳ್ಳೆಯ ಮನೋಭಾವನೆ, ಶಿಸ್ತು, ಸಂಯಮ, ಬುದ್ಧಿವಂತಿಕೆ ಬೆಳೆಯುತ್ತದೆ ಎಂದು ತಿಳಿಸಿದರು. ಸಿ.ಆರ್.ಪಿ. ಶ್ರೀದಾಸರ, ಶ್ರೀ ಎನ್.ಹೆಚ್. ಜಾಧವ ಶ್ರೀ ಮುಲ್ಲಾ ಶ್ರೀ ಶಿರಿಯಪ್ಪಗೌಡರ ಹಾಗೂ ಸ್ಕೌಟ್ ವಿಭಾಗದ ನಾಯಕ ಗೈಡ್ ವಿಭಾಗದ ನಾಯಕಿ ಭಾಗವಹಿಸಿದ್ದರು.

* ಫೆಬ್ರವರಿ 15 ರಂದು ಮುಂಡರಗಿ ತಾಲ್ಲೂಕಾ ರ‍್ಯಾಲಿಯನ್ನು ಸರಕಾರಿ ಶಾಸಕರ ಮಾದರಿ ಶಾಲೆಯಲ್ಲಿ ನಡೆಸಲಾಯಿತು. ರ‍್ಯಾಲಿಯಲ್ಲಿ ಶ್ರಿ ಮಂಜುನಾಥ, ಇಟಗಿ, ತಾಲ್ಲೂಕಾ ಅಧ್ಯಕ್ಷರು ಚಾಲನೆ ನೀಡಿದರು. ರ‍್ಯಾಲಿಯಲ್ಲಿ ಶ್ರೀ ಹದ್ಲಿ, ಶ್ರೀ ಉಮೇಶ ಗಂಗಾಪುರ, ಶ್ರೀ ಶಿರನಳ್ಳಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಫೆಬ್ರವರಿ 13 ರಂದು ಗದಗ ಗ್ರಾಮೀಣ ಸ್ಥಳೀಯ ಸಂಸ್ಥೆಯ ರ‍್ಯಾಲಿಯನ್ನು ಶ್ರೀ ಬಸವೇಶ್ವರ ಕಲ್ಯಾಣ ಮಂಟಪ ಹರ್ತಿ ಗ್ರಾಮದಲ್ಲಿ ನಡೆಸಲಾಯಿತು.

ಕಾರ್ಯಕ್ರಮದಲ್ಲಿ ಶ್ರೀ ತೋಟಪ್ಪನ್ನವರ, ಶ್ರೀ ಎಂ.ಕೆ. ಜಕ್ಕಲಿ, ಶ್ರೀ ಕೆ.ಎಸ್. ಬಾಳಿಕಾಯಿ, ಶ್ರೀಮತಿ ದೇಶಿಹಳ್ಳಿ, ಶ್ರೀಮತಿ ಹೆರಕಲ್ಲ, ಶ್ರೀಮತಿ ಗುಂಜಳ, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## ಹಾಸನ

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮತದಾನದ ಪ್ರಾಮುಖ್ಯತೆ ಅಗ್ರಗಣ್ಯವಾದದ್ದು. ಅದನ್ನು ಸೂಕ್ತ ರೀತಿಯಲ್ಲಿ ಚಲಾಯಿಸಬೇಕೆಂದು ಆಲೂರು ತಾಲ್ಲೂಕು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೊಟ್ರೇಶ್. ಎಸ್. ಉಪ್ಪಾರ್ ಅಭಿಪ್ರಾಯಪಟ್ಟರು.

ಅವರು ಆಲೂರು ತಾಲ್ಲೂಕು ಟಿ. ಗುಡ್ಡೇನಹಳ್ಳಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ತಾಲ್ಲೂಕು ಸ್ಥಳೀಯ ಸಂಸ್ಥೆ ಹಮ್ಮಿಕೊಂಡಿದ್ದ ರಾಷ್ಟ್ರೀಯ ಮತದಾರರ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದರು.

ಗ್ರಾಮ ಪಂಚಾಯಿತಿಯ ಅಭಿವೃದ್ಧಿ ಅಧಿಕಾರಿಗಳಾದ ಶ್ರೀಮತಿ ಚಂದ್ರಮ್ಮ ಮಾತನಾಡಿ ಮುಂಬರುವ ಲೋಕಸಭಾ ಚುನಾವಣೆಯಲ್ಲಿ 18ವರ್ಷಕ್ಕಿಂತ ಮೇಲ್ಪಟ್ಟ ಪ್ರತಿಯೊಬ್ಬರೂ ಮತ ಚಲಾಯಿಸಬೇಕೆಂದು, ಮತದಾನದ ಮಹತ್ವವನ್ನು ತಿಳಿಸಿ ಶುಭಕೋರಿದರು.

* ಕ್ಯಾನ್ಸರ್ ಒಂದು ಜಾಗತಿಕವಾಗಿ ಹಬ್ಬಿರುವ ಭೀಕರ ಖಾಯಿಲೆಯೆಂದೇ ಹೇಳಬಹುದು. ಮಾನವನ ದುಶ್ಚಟಗಳಿಂದ, ಅಶುಚಿಯಿಂದ ಹಾಗೆಯೇ ಅಲ್ಪ ಪ್ರಮಾಣದಲ್ಲಿ ಅನುವಂಶೀಯತೆಯಿಂದ ಬರುವ ಈ ಖಾಯಿಲೆಯನ್ನು ಪ್ರಾರಂಭದ ಹಂತದಲ್ಲಿಯೇ ಗುಣಪಡಿಸಬಹುದಾಗಿದೆ. ಇಲ್ಲಿ ರೋಗಿಗೆ ಆತ್ಮವಿಶ್ವಾಸ ಬಹಳ ಮುಖ್ಯ ಎಂದು ಆಲೂರು ತಾಲ್ಲೂಕು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯ ನೋಡಲ್ ಅಧಿಕಾರಿ ಹಾಗೂ ಡಯಟ್ ಕಾಲೇಜಿನ ಹಿರಿಯ ಉಪನ್ಯಾಸಕರಾದ ಶ್ರೀಮತಿ ಬಿ.ಎಂ. ಗೀತಾ



ಅವರು ಆಲೂರು ತಾಲ್ಲೂಕಿನ ಸರಕಾರಿ ಹಿರಿಯ ಪ್ರಾಥಮಿಕ ಪಾಠಶಾಲೆ ಕವಳೀಕೆರೆಯಲ್ಲಿ ಸ್ಥಳೀಯ ಸಂಸ್ಥೆ ಹಮ್ಮಿಕೊಂಡಿದ್ದ ಅಂತರಾಷ್ಟ್ರೀಯ ಕ್ಯಾನ್ಸರ್ ದಿನಾಚರಣೆ ಕಾರ್ಯಕ್ರಮದ ಉದ್ಘಾಟನೆ ಮಾಡಿ ಮಾತನಾಡಿದರು.

ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರೂ ಹಾಗೂ ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ನಾಗರಾಜ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿ ನಮ್ಮ ತಾಲ್ಲೂಕಿನಲ್ಲಿ ಇತ್ತೀಚೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಉತ್ತಮವಾದ ಕೆಲಸಗಳನ್ನು ಮಾಡುತ್ತಿದೆ. ಮಕ್ಕಳಲ್ಲಿ ಶಿಸ್ತು, ಸಂಯಮವನ್ನು ಬೆಳೆಸುವ ನಿಟ್ಟಿನಲ್ಲಿ ಹಲವಾರು ಮೌಲ್ಯಯುತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ ಎಂದರು.

ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೊಟ್ರೇಶ್ ಎಸ್. ಉಪ್ಪಾರ್ ಪ್ರಾಸ್ತಾವಿಕವಾಗಿ ಮಾತನಾಡಿ 19 ಮತ್ತು 20ನೇ ಶತಮಾನದಲ್ಲಿ ಜಾಗತಿಕವಾಗಿ ಮಾನವನನ್ನು ಭೀಕರವಾಗಿ ಕಾಡುತ್ತಿರುವ ಖಾಯಿಲೆ ಎಂದರೆ ಅದು ಕ್ಯಾನ್ಸರ್. ಈ ಕುರಿತು ವಿಶ್ವದಾದ್ಯಂತ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ನಮ್ಮ ಸಂಸ್ಥೆ ಸುಮಾರು 216ಕ್ಕೂ ಅಧಿಕ ರಾಷ್ಟ್ರಗಳಲ್ಲಿ ಇಂತಹ ಅಮೂಲ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಜನತೆಯನ್ನು ಎಚ್ಚರಿಸುವ ಕಾರ್ಯವನ್ನು ಮಾಡುತ್ತಿದೆ ಎಂದರು. ಕಾರ್ಯಕ್ರಮದಲ್ಲಿ ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಎಚ್.ಜಿ. ಕಾಂಚನಮಾಲ, ಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ಗೌರಮ್ಮ, ಅಂಗನವಾಡಿ ಕಾರ್ಯಕರ್ತೆ ಶ್ರೀಮತಿ ರತ್ನಮ್ಮ, ಭಗತ್ ಸಿಂಗ್ ಯುವಕ ಮಂಡಳಿ ಅಧ್ಯಕ್ಷ ದೀಪಕ್ ಮುಂತಾದವರು ಮಾತನಾಡಿದರು.

* ಭಾರತ್ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಸೇವಾಮನೋಭಾವ-ವನ್ನು ಬೆಳೆಸುವುದರ ಜೊತೆಗೆ ಸಾಮಾಜಿಕ ಬದ್ಧತೆ, ವಿಶ್ವ ಭ್ರಾತೃತ್ವ, ಸಮಾನತೆ, ಶಿಸ್ತು, ಮಾನಸಿಕ ವಿಸ್ತಾರತೆ ಪಡೆಯುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಎಂದು ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಎಚ್.ಜಿ. ಕಾಂಚನಮಾಲ ಅವರು. ಆಲೂರು ತಾಲ್ಲೂಕಿನ ಕವಳಿಕೆರೆ ಸರಕಾರಿ ಹಿರಿಯ ಪ್ರಾಥಮಿಕ ಪಾಠ ಶಾಲೆಯ ಚಾಮುಂಡೇಶ್ವರಿ ಗೈಡ್ ದಳದಲ್ಲಿ ಹಮ್ಮಿಕೊಂಡಿದ್ದ ದೀಕ್ಷಾ ಸಮಾರಂಭದಲ್ಲಿ ಮಾತನಾಡಿದರು.

ಆಲೂರು ತಾಲ್ಲೂಕಿನ ಸಂತ ಜೋಸೆಪ್ ಶಾಲೆಯ ಗೈಡ್ ಶಿಕ್ಷಕಿ ಕು. ಅಶ್ವಿನಿ ಮಕ್ಕಳ ಕಲಿಕಾ ದೃಢತೆಯನ್ನು ತಿಳಿಸಿಕೊಟ್ಟರು. ಗೈಡ್ ಶಿಕ್ಷಕಿ ಶ್ರೀಮತಿ ಜಿ.ವಿ. ಸುಜಾತ ದೀಕ್ಷೆ ನೀಡಿದರು. ಈ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಆಲೂರು ತಾಲ್ಲೂಕು ನೋಡೆಲ್ ಅಧಿಕಾರಗಳಾದ ಶ್ರೀಮತಿ ಬಿ.ಎಂ. ಗೀತಾ, ತಾಲ್ಲೂಕು ಉಪಾಧ್ಯಕ್ಷರಾದ ಟಿ.ಪಿ.ಇ.ಓ. ಶ್ರೀ ನಾಗರಾಜ್, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಕೊಟ್ರೇಶ್ ಎಸ್. ಉಪ್ಪಾರ್, ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ಗೌರಮ್ಮ, ಮುಂತಾದವರು ಪಾಲ್ಗೊಂಡಿದ್ದರು.



* ಡಿಸೆಂಬರ್ 15, 2018 ರಂದು ಬಿ.ಆರ್.ಸಿ. ಕೇಂದ್ರದಲ್ಲಿ ಬೇಲೂರು ತಾಲ್ಲೂಕಿನ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಆಯೋಜಿಸಲಾಗಿತ್ತು. ಜಿಲ್ಲಾ ಕಾರ್ಯದರ್ಶಿಯಾದ ಶ್ರೀ ಸುರೇಶ್ ಗುರೂಜಿರವರು ಮಾತನಾಡಿ ಸ್ಕೌಟ್-ಗೈಡ್ ಶಿಕ್ಷಣವು ವಿದ್ಯಾರ್ಥಿ ಹಾಗೂ ಜೀವನದಲ್ಲಿ ಶಿಸ್ತನ್ನು ಬೆಳೆಸುವುದರ ಜೊತೆಗೆ ಆತ್ಮಸ್ಥೈರ್ಯವನ್ನು ಬೆಳೆಸುತ್ತದೆ, ಹಾಗೆಯೇ ರಾಷ್ಟ್ರಪ್ರೇಮ, ರಾಷ್ಟ್ರಭಕ್ತಿ, ವೈಶಾಲ್ಯ ಮನೋಭಾವ ಬೆಳೆಯುತ್ತದೆ ಆದ್ದರಿಂದ ಎಲ್ಲಾ ಶಾಲೆಯಲ್ಲಿ ಕಡ್ಡಾಯವಾಗಿ ಸ್ಕೌಟ್ಸ್-ಗೈಡ್ಸ್ ದಳಗಳನ್ನು ತೆರೆದು ಇದರ ಉಪಯೋಗ ಪಡೆಯಬೇಕು ಎಂದು ತಿಳಿಸಿದರು.

* ಸಹಬಾಳ್ವೆ, ಸಹೋದರತೆ, ಸಮಾನತೆ ಸ್ಕೌಟ್ಸ್-ಗೈಡ್ಸ್‌ನ ಮುಖ್ಯ ಧ್ಯೇಯಗಳು. ಹಾಗೆಯೇ ಈ ಸಂಸ್ಥೆ ಜಗತ್ತಿನಲ್ಲಿಯೇ ಶಿಸ್ತು, ಸಂಯಮ ಹಾಗೂ ಸೇವೆಗಾಗಿ ಗುರುತಿಸಿಕೊಂಡಿದೆ ಎಂದು ಆಲೂರು ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಹೊನ್ನೇಶ್ ಕುಮಾರ್ ಅಭಿಪ್ರಾಯಪಟ್ಟರು.

ಅವರು ತಾಲ್ಲೂಕು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಹಾಗೂ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ವಾಟೆಹೊಳೆ ಇವರ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಂಡಿದ್ದ ಕುಷ್ಠರೋಗ ದಿನಾಚರಣೆ ಹಾಗೂ ಹುತಾತ್ಮರ ದಿನಾಚರಣೆ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಮಹಾತ್ಮ ಗಾಂಧೀಜಿಯವರು ಹತ್ಯೆಯಾದ ಜನವರಿ 30 ನ್ನು ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ಎಲ್ಲಾ ದೇಶಭಕ್ತರ, ಯೋಧರ ಸ್ಮರಣಾರ್ಥಕ್ಕಾಗಿ ಹುತಾತ್ಮರ ದಿನಾಚರಣೆಯನ್ನಾಗಿ ಆಚರಿಸುತ್ತಿದ್ದೇವೆ. ಹಿರಿಯರ ಆದರ್ಶ ವ್ಯಕ್ತಿಗಳ ಗುಣಗಳನ್ನು ನಾವುಗಳು ಮೈಗೂಡಿಸಿಕೊಂಡು ಸಾಗಬೇಕಿದೆ ಎಂದು ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಹೊನ್ನೇಶ್ ಕುಮಾರ್ ಅಭಿಪ್ರಾಯಪಟ್ಟರು.

ಕ್ಷೇತ್ರ ಸಮನ್ವಯಾಧಿಕಾರಿಗಳಾದ ಶ್ರೀ ಎಚ್.ಎ. ರಮೇಶ್ ಕಾರ್ಯಕ್ರಮದ ಉದ್ಘಾಟನೆ ಮಾಡಿ ಮಾತನಾಡಿ ಕುಷ್ಠರೋಗವು ಮೈಕ್ರೋಬ್ಯಾಕ್ಟೀರಿಯಾ ಲ್ಯಾಪ್ರೆಯಿಂದ ಬರುತ್ತದೆ ಇದು ಮನುಷ್ಯನ ಚರ್ಮದಿಂದ ಮಾಂಸಖಂಡಗಳು, ಮೂಳೆ ಹಾಗೂ ನರಗಳ ಮೇಲೆ ಪ್ರಭಾವ ಬೀರಿ ಶಕ್ತಿಹೀನವಾಗಿ ಮಾಡಿ, ಕೊಳೆತವನ್ನುಂಟು ಮಾಡುತ್ತದೆ ಎಂದರು.

ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರು ಹಾಗೂ ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ನಾಗರಾಜ್ ಮಾತನಾಡಿ ಮಹಾತ್ಮ ಗಾಂಧೀಜಿಯವರು ಸತ್ಯ, ಶಾಂತಿ, ಅಹಿಂಸೆಗಳನ್ನು ಮೈಗೂಡಿಸಿಕೊಂಡು ಬೆಳೆದವರು, ಅಂತೆಯೇ ಬದುಕಿ ಬಾಳಿದವರು. ಅವರ ಹತ್ಯೆಯ ದಿನವನ್ನು ದೇಶದಾದ್ಯಂತ ನಾವಿಂದು ಹುತಾತ್ಮರ ದಿನಾಚರಣೆಯಾಗಿ ಆಚರಿಸುತ್ತಿದ್ದೇವೆ. ಇಲ್ಲಿ ಅವರ ಮಾನವೀಯ ಮೌಲ್ಯಗಳನ್ನು, ಅವರ ತತ್ವಾದರ್ಶಗಳನ್ನು ನಾವುಗಳು ಅನುಸರಿಸಬೇಕಿದೆ ಎಂದರು.

ಕಾರ್ಯಕ್ರಮದಲ್ಲಿ ಸಾಮೂಹಿಕವಾಗಿ ಪ್ರಾರ್ಥಿಸಿದರು. ಗೈಡ್ ಕ್ಯಾಪ್ಟನ್ ಶ್ರೀಮತಿ ರೇಷ್ಮಾ ನಿರೂಪಿಸಿದರು. ಗೈಡ್ ಕ್ಯಾಪ್ಟನ್ ಶ್ರೀಮತಿ ಮಹೇರಾ ಬಾನು ಸ್ವಾಗತಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ವಿ ಮೋಹನ್ ವಂದಿಸಿದರು.

* ಆಲೂರು ತಾಲ್ಲೂಕು ಮರಸು ಹೊಸಹಳ್ಳಿಯ ಮೊರಾರ್ಜಿ ದೇಶಾಯಿ ವಸತಿ ಶಾಲೆಯ ಚಾಲುಕ್ಯ ಸ್ಕೌಟ್ಸ್ ಟ್ರೂಪ್ ಹಾಗೂ ಗೈಡ್ಸ್ ದಳಗಳ ಮಕ್ಕಳು ಸ್ಕೌಟ್ ಮಾಸ್ಟರ್ ಶ್ರೀ ಮೋಹನ್ ಹಾಗೂ ಗೈಡ್ ಕ್ಯಾಪ್ಟನ್ ಶ್ರೀಮತಿ ಸುನೀತಾ ಅವರ ಮಾರ್ಗದರ್ಶನದಲ್ಲಿ ಸಮುದಾಯದ ಕಾರ್ಯ ಯೋಜನೆಯ ಅಂಗವಾಗಿ ಮೊಸಳೆ ಹೊಸಹಳ್ಳಿ ಗ್ರಾಮದ ಪ್ರತಿ ಮನೆಗೂ ತೆರಳಿ ಡೆಂಗ್ಯೂ ಮಲೇರಿಯಾ, ಮಂಕಿ ರೋಗ ಹಾಗೂ ಜಂತುಹುಳುವಿನ ಕುರಿತು ಪೋಸ್ಟರ್ಸ್ ತೋರಿಸಿ ವಿವರಣೆ ನೀಡುವುದರ ಮೂಲಕ ಜನಜಾಗೃತಿ ಮೂಡಿಸಿದರು.

* ಫೆಬ್ರವರಿ 16 ರಿಂದ 17 ರ ವರೆಗೆ ಸ್ಥಳೀಯ ಸಂಸ್ಥೆ ಹೊಳೆನರಸೀಪುರ ಆಶ್ರಯದಲ್ಲಿ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಹಳೇ ಕರ್ನಾಟಕ ಬ್ಯಾಂಕ್, ಸ.ಹಿ.ಪ್ರಾ. ಶಾಲೆಯಲ್ಲಿ ಏರ್ಪಡಿಸಲಾಗಿತ್ತು. ವೀರ ಯೋಧರಿಗೆ ನಮನವನ್ನು ಸಲ್ಲಿಸುವ ಕಾರ್ಯಕ್ರಮದಲ್ಲಿ ಮಾಜಿ ಯೋಧರಾದ ಶ್ರೀ ರವಿಕುಮಾರ್, ಶ್ರೀ ಮಂಜುನಾಥ್

ಮತ್ತು ಶ್ರೀ ವಸಂತ್ ಕುಮಾರ್ ಮಾತನಾಡಿ ವೀರಯೋಧರ ಬಗ್ಗೆ ಹಾಗೂ ಅವರ ಕರ್ತವ್ಯಗಳನ್ನು ಹೇಗೆ ಮತ್ತು ಎಂತಹ ಪರಿಸ್ಥಿತಿಗಳಲ್ಲಿ ಹೇಗೆ ಎದುರಿಸುತ್ತಾರೆಂದು ತಿಳಿಸಿದರು.

ಶ್ರೀ ರೆಹಮಾನ್ ರವರು ಇಂದಿನ ಮಕ್ಕಳು ಯಾವ ರೀತಿಯಾಗಿ ದೇಶಪ್ರೇಮವನ್ನು ಹೊಂದಿರಬೇಕೆಂದು ಮಕ್ಕಳಿಗೆ ಮನವರಿಕೆ ಮಾಡಿಕೊಟ್ಟರು. ಮಕ್ಕಳು ಹೊಳೆನರಸೀಪುರದ ಪ್ರಮುಖ ಬೀದಿಗಳಲ್ಲಿ ಪಥಸಂಚಲನದ ಮೂಲಕ ಯೋಧರಿಗೆ ಗೌರವವನ್ನು ಸೂಚಿಸಿದರು. ನಂತರ ವೇದಿಕೆ ಉದ್ಘಾಟನಾ ಕಾರ್ಯಕ್ರಮದಲ್ಲಿ ಶ್ರೀ ವಿವೇಕಾನಂದ, ಶ್ರೀ ಶಂಕರ್ ದಾಯಳ್ ಐತಾಳ್, ಶ್ರೀ ಕುಳ್ಳೇಗೌಡ ಸಿ.ಆರ್.ಪಿ., ಶ್ರೀ ಸೋಮಶೇಖರ್ ಸಿ.ಆರ್.ಪಿ., ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನ ಮಾಲ ಹಾಗೂ ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀಮತಿ ಸೌಭಾಗ್ಯ ಬಿ.ಆರ್.ಸಿ., ಮತ್ತಿತರರು ಉಪಸ್ಥಿತರಿದ್ದರು.

ಈ ಕಾರ್ಯಕ್ರಮದಲ್ಲಿ ಶ್ರೀ ನಾರಾಯಣಶೆಟ್ಟಿ, ತಾಲ್ಲೂಕು ಕಾರ್ಯದರ್ಶಿಯವರು ಸ್ವಾಗತಿಸಿದರು. ಶ್ರೀಮತಿ ಕುಮುದ ನಿರೂಪಣೆ ಮಾಡಿದರು.

## ಹಾವೇರಿ

ಜಿಲ್ಲಾ ಆಡಳಿತ, ಪೊಲೀಸ್ ಇಲಾಖೆ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ 30ನೇ ರಾಷ್ಟ್ರೀಯ ರಸ್ತೆ ಸುರಕ್ಷತಾ ಸಪ್ತಾಹ ದಿನಾಚರಣೆಯನ್ನು ಫೆಬ್ರವರಿ 4 ರಂದು ಆಚರಿಸಲಾಯಿತು. ಹಾವೇರಿ ಶಹರದ ವಿವಿಧ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಂದ 100 ಸ್ಕೌಟ್ಸ್‌ಗಳು, 100 ಗೈಡ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಪರಶುರಾಮ ಹೆಚ್ಚುವರಿ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಜಗದೀಶ. ಎಸ್.ಪಿ., ಅಪರ ಜಿಲ್ಲಾಧಿಕಾರಿಗಳಾದ ಶ್ರೀ ವಿನೋದ ಕುಮಾರ್ ಉಪಸ್ಥಿತರಿದ್ದರು.



## ಕಾರವಾರ

ಫೆಬ್ರವರಿ 8 ರಿಂದ 12 ರ ವರೆಗೆ ರೋವರ್ಸ್-ರೇಂಜರ್‌ಗಳಿಗೆ ಜಿಲ್ಲಾ ಮಟ್ಟದ ರೈಫಲ್ ತರಬೇತಿ ಶಿಬಿರವನ್ನು ಕಾರವಾರದ ಕವಾಯತು ಮೈದಾನದಲ್ಲಿ ನಡೆಸಲಾಯಿತು.

ಫೆಬ್ರವರಿ 8 ರಂದು ಕಾರವಾರ ನಗರದ ಗುರುಭವನದಲ್ಲಿ ಉದ್ಘಾಟನಾ ಕಾರ್ಯಕ್ರಮ ನಡೆಸಲಾಯಿತು. ಶ್ರೀ ಸಚಿನ್ ಲಾರೆನ್ಸ್ ಆರ್.ಪಿ.ಐ. ಇವರು ಆಗಮಿಸಿ ಕಾರ್ಯಕ್ರಮ ಉದ್ಘಾಟಿಸಿದರು. ಶಿಬಿರದ ಸಹಾಯಕರಾಗಿ ಶ್ರೀ ಗೋಪಾಲ್ ಎ.ಎಸ್.ಐ. ಶ್ರೀ ನಿತ್ಯಾನಂದ ಹೆಡ್ ಕಾನ್ಸ್‌ಟೇಬಲ್ ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡಿಸ್ ಸ್ಥಾನಿಕ ಆಯುಕ್ತರಾದ ಶ್ರೀ ಎಸ್.ಎಸ್.ಭಟ್, ಪಿ.ಆರ್.ಓ., ಶ್ರೀ ಕರಿಸಿದ್ಧಪ್ಪ ಎ.ಎಸ್.ಓ.ಸಿ., ಶ್ರೀಮತಿ ಶೋಭಾ ವರ್ಣೇಕರ್ ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಸ್ವಾಗತವನ್ನು ಶ್ರೀ ಬಿ.ಡಿ. ಫರ್ನಾಂಡಿಸ್ ರವರು ನೆರವೇರಿಸಿದರು. ಶ್ರೀಮತಿ ಶೋಭಾ ವರ್ಣೇಕರ್ ವಂದಿಸಿದರು. ಶ್ರೀ ಕರಿಸಿದ್ದಪ್ಪ ನಿರೂಪಿಸಿದರು. ಶ್ರೀ ಸಚಿನ್ ಲಾರೆನ್ಸ್ ರವರು ಉದ್ಘಾಟನಾ ಭಾಷಣದಲ್ಲಿ ಶಿಸ್ತು, ಸಂಯಮ, ಸಮಯಪ್ರಜ್ಞೆ ಹಾಗೂ ಸ್ಕೌಟ್ಸ್-ಗೈಡ್ಸ್ ನಿಯಮದಂತೆ ನಡೆಯುವ ನಿಮಗೆ ರೈಫಲ್ ತರಬೇತಿ ನೀಡಲು ನಿಮಗೆ ಯಾವುದೇ ಅಡೆತಡೆಗಳಿರುವುದಿಲ್ಲ. ತಾವುಗಳು ರೈಫಲ್ ತರಬೇತಿ ಪಡೆದು ದೇಶದ ಒಳಿತಿಗೆ ಉತ್ತಮ ನಾಗರಿಕ ಪ್ರಜೆಯಾಗಿ ಎಂದು ತಿಳಿಸುತ್ತೇನೆ ಎಂದರು ಶ್ರೀ ಗೋಪಾಲ್ ರವರು ಮಾತನಾಡಿ ತಾವು ಕೊಡುವ ತರಬೇತಿಯನ್ನು ಸರಿಯಾಗಿ ತಿಳಿದು, ಕಲಿತು ದೇಶ ಸೇವೆಗೆ ನಿಮ್ಮ ಸಹಾಯ ಅತ್ಯಮೂಲ್ಯ ಎಂದು ಹೇಳಿದರು.



## ...ೋವರ್, ರೇಂಜರ್‌ಗಳಿಗೆ ರೈಫಲ್ ತರಬೇತಿ



## ಮಂಡ್ಯ

ಪಿ.ಇ.ಎಸ್. ಕಾಲೇಜ್ ಮಂಡ್ಯ ರೋವರ್ ಕ್ರ್ಯೂನ ವತಿಯಿಂದ ರಕ್ತದಾನ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದ ನೇತೃತ್ವವನ್ನು ಶ್ರೀ ವೀರೇಶ್ ಕೆ. ರೋವರ್ ಸ್ಕೌಟ್ ಲೀಡರ್ ಮತ್ತು ಶ್ರೀ ನಂದೀಶ್ ಕುಮಾರ್ ಎಂ.ಎಸ್. ಸಹಾಯಕ ರೋವರ್ ಸ್ಕೌಟ್ ಲೀಡರ್ ವಹಿಸಿದ್ದರು. 40 ಮಂದಿ ರೋವರ್ಸ್‌ಗಳು ಭಾಗವಹಿಸಿ, 204 ಯೂನಿಟ್ ರಕ್ತವನ್ನು ಸಂಗ್ರಹಿಸಿದ್ದಾರೆ.

* ಪಿ.ಇ.ಎಸ್. ಕಾಲೇಜ್ ಮಂಡ್ಯ ರೋವರ್ ಘಟಕದ ವಿದ್ಯಾರ್ಥಿಗಳು ವೀರ ಮರಣ ಹೊಂದಿದ ವೀರ ಯೋಧರಿಗೆ ಶ್ರದ್ಧಾಂಜಲಿ ಹಾಗೂ ಭಯೋತ್ಪಾದನೆಯ ಹೇಯ ದುಷ್ಕೃತ್ಯ ಖಂಡಿಸಿ ಕಾಲೇಜಿನಿಂದ ಜಿಲ್ಲಾಧಿಕಾರಿ ಕಛೇರಿ ವರೆಗೆ ಮೆರವಣಿಗೆ ಹಮ್ಮಿಕೊಂಡಿದ್ದರು.

ರೋವರ್ ಸ್ಕೌಟ್ ಲೀಡರ್ ಶ್ರೀ ವೀರೇಶ್ ಎಸ್.ಕೆ.



ಮತ್ತು ಶ್ರೀ ನಂದೀಶ್ ಕುಮಾರ ಎಂ.ಎಸ್. ಕಾಲೇಜಿನ ಇತರ ಉಪನ್ಯಾಸಕರು ಭಾಗವಹಿಸಿದ್ದರು.

* ಫೆಬ್ರವರಿ 7 ಮತ್ತು 8 ರಂದು ರಾಷ್ಟ್ರೀಯ ಜಂತುಹುಳು ನಿವಾರಣಾ ದಿನದ ಬಗ್ಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಸರ್ಕಾರಿ ಪ್ರೌಢಶಾಲೆ ಸೆಣಬು ಗ್ರಾಮ, ಪಿ.ಎಂ. ಹೊಸೂರು ಶಾಲೆ, ಪಾಂಡುಪುರ ತಾಲೂಕು ಸರ್ಕಾರಿ ಪ್ರೌಢಶಾಲೆ, ಆದರ್ಶ ಪ್ರೌಢಶಾಲೆ ಎಲೆಕೆರೆ, ಮಂಡ್ಯ ರೋಟರಿ ಪ್ರೌಢಶಾಲೆ, ಮಂಡ್ಯ ಉತ್ತರ ವಲಯದ ದೊಡ್ಡಗರುಡನಹಳ್ಳಿ, ಮದ್ದೂರು ಪದವಿಪೂರ್ವ ಕಾಲೇಜು, ಕೆಸ್ತೂರು. ಸರ್ಕಾರಿ ಪ್ರೌಢಶಾಲೆ, ಗೆಜ್ಜಲಗೆರೆ ಮತ್ತು ಪಾಂಡುಪುರ ಬಾಲಕಿಯರ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್, ಬುಲ್‌ಬುಲ್ಸ್‌ಗಳು ತಮ್ಮ ಶಾಲೆಯ ಸ್ಕೌಟ್ ಶಿಕ್ಷಕರೊಂದಿಗೆ, ಗೈಡ್ ಶಿಕ್ಷಕರೊಂದಿಗೆ ಭಾಗವಹಿಸಿ ತಮ್ಮ ತಮ್ಮ ಸಮುದಾಯದಲ್ಲಿ ಮಾಹಿತಿಯನ್ನು ನೀಡುವ ಕಾರ್ಯವನ್ನು ಮಾಡಿರುತ್ತಾರೆ.

* ಫೆಬ್ರವರಿ 10 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ರೋಟರಿ ಶಾಲೆ ಮಂಡ್ಯ ಸ್ಕೌಟ್ಸ್-ಗೈಡ್‌ಗಳು ಇಂಡುವಾಳು



ಅರಣ್ಯಕ್ಕೆ ಸೈಕಲ್ಲಿನಲ್ಲಿ ತೆರಳಿ ಸ್ವಚ್ಛತಾ ಕಾರ್ಯಕ್ರಮ ಹಾಗೂ ಅಡಿಗೆ ಮಾಡುವುದು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ. ವರಪ್ರಸಾದ್ ಹಾಗೂ ಸ್ಕೌಟ್ ಮಾಸ್ಟರ್ ಶ್ರೀ ಮೋಹನ್ ಉಪಸ್ಥಿತರಿದ್ದರು.

* ಫೆಬ್ರವರಿ 12 ರಂದು ಆದರ್ಶ ಪ್ರೌಢಶಾಲೆ ಎಲೆಕೆರೆ, ಪಾಂಡುಪುರ ತಾಲೂಕು ಗೈಡ್ ಕ್ಯಾಪ್ಟನ್ ಶ್ರೀಮತಿ ನೀತು ರವರ ಮಾರ್ಗದರ್ಶನದಲ್ಲಿ ಗೈಡ್ ಮಕ್ಕಳು ಹೊರ ಸಂಚಾರವನ್ನು ಕೈಗೊಂಡಿದ್ದು, ಅಡಿಗೆ ಮಾಡುವ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ಈ ಸಂದರ್ಭದಲ್ಲಿ ಶಾಲೆಯ ಮುಖ್ಯ ಶಿಕ್ಷಕರು / ಸಹ ಶಿಕ್ಷಕರು ಆಗಮಿಸಿದ್ದರು.



## ಮೈಸೂರು

ಇತ್ತೀಚೆಗೆ ಸ್ಕೌಟ್ಸ್-ಗೈಡ್ಸ್, ಮೈಸೂರು ಇವರ ಸಹಯೋಗದೊಂದಿಗೆ ರೇಂಜರ್ ಘಟಕದ ಉದ್ಘಾಟನೆಯನ್ನು ಜೆ.ಎಸ್.ಎಸ್. ಮಹಿಳಾ ಪದವಿಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿತ್ತು. ಶ್ರೀ ಅಬ್ದುಲ್ ಜಮೀರ್, ಜಿಲ್ಲಾ ಕಾರ್ಯದರ್ಶಿಗಳು ಕಾರ್ಯಕ್ರಮ ಉದ್ಘಾಟಿಸಿ ಮಾತನಾಡುತ್ತಾ ವಿದ್ಯಾರ್ಥಿನಿಯರು ದೇಶಭಕ್ತಿ, ದೇಶಪ್ರೇಮ, ಸಾಮಾಜಿಕ ಕಳಕಳಿ ಮತ್ತು ಸೇವಾ ಮನೋಭಾವವನ್ನು ಬೆಳೆಸಿಕೊಳ್ಳುವಂತೆ ಹಾಗೂ ಸ್ವಾವಲಂಬನೆಯನ್ನು ರೂಢಿಸಿಕೊಳ್ಳಬೇಕೆಂದು ಹೇಳಿದರು. ಶ್ರೀ ಆರ್.ಪಿ. ಚಂದ್ರು ಜಿಲ್ಲಾ ಸಂಘಟಕರು ಇವರು ಮಾತನಾಡುತ್ತಾ ವಿದ್ಯಾರ್ಥಿನಿಯರು ಶಿಸ್ತು ಮತ್ತು ಸಂಯಮವನ್ನು ರೂಪಿಸಿಕೊಳ್ಳಬೇಕೆಂಬ ಆಶಯವನ್ನು ವ್ಯಕ್ತ ಪಡಿಸಿದರು. ಡಾ. ಕೆ.ವಿ. ಸುರೇಶ, ಪ್ರಾಂಶುಪಾಲರು, ಜೆ.ಎಸ್.ಎಸ್. ಮಹಿಳಾ ಕಾಲೇಜು ಇವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಕಾರ್ಯಕ್ರಮದಲ್ಲಿ ಕಾಲೇಜಿನ ಪ್ರಾಂಶುಪಾಲರು, ಅಧ್ಯಾಪಕರು ಮತ್ತಿತರರು ಉಪಸ್ಥಿತರಿದ್ದರು.

* ಸರ್ಕಾರಿ ಪ್ರಥಮ ದರ್ಜೆ ಕಾಲೇಜು ನಂಜನಗೂಡು ಇಲ್ಲಿ ರೇಂಜರ್ಸ್ ಮತ್ತು ರೋವರ್ಸ್ ಘಟಕದಿಂದ ಫೆಬ್ರವರಿ 16 ರಂದು "ಕಡ್ಡಾಯ ಮತದಾನ ಮತ್ತು ಮತದಾನದ ಅರಿವಿನ ಜಾಗೃತಿ-ಜಾಥಾ" ವನ್ನು ಹಮ್ಮಿಕೊಳ್ಳಲಾಯಿತು. ಜಾಥಾವನ್ನು ನಂಜನಗೂಡಿನ ಪ್ರಮುಖ ಬೀದಿಗಳಲ್ಲಿ, ದೇವಿರಮ್ಮನ ಹಳ್ಳಿ ಮತ್ತು ಊಟಿ-ನಂಜನಗೂಡಿನ ಮುಖ್ಯ ರಸ್ತೆಯಲ್ಲಿ ನಡೆಸಲಾಯಿತು. ವಿದ್ಯಾರ್ಥಿಗಳು ಮತದಾನದ ಮಹತ್ವ ಹಾಗೂ ಕಡ್ಡಾಯ ಮತದಾನದ ಫಲಕಗಳನ್ನು ಹಿಡಿದು ಘೋಷಣೆಗಳನ್ನು ಸಾರುವುದರ ಮೂಲಕ ಜಾಗೃತಿ ಜಾಥಾವನ್ನು ಯಶಸ್ವಿಗೊಳಿಸಿದರು. ಕಾಲೇಜಿನ ಸಿಬ್ಬಂದಿ ವರ್ಗ ಹಾಗೂ ವಿದ್ಯಾರ್ಥಿ ವಿದ್ಯಾರ್ಥಿನಿಯರು ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.



## ರಾಮನಗರ

ಫೆಬ್ರವರಿ 22ರಂದು ಕನಕಪುರ ತಾ॥ ಹಾರೋಹಳ್ಳಿ ಪ್ರಗತಿ ವಿದ್ಯಾ ನಿಕೇತನ ಶಾಲೆಯ ಆವರಣದಲ್ಲಿ ಲಾರ್ಡ್ ಬೇಡನ್ ಪೊವೆಲ್ ರವರ ಜನ್ಮ ದಿನಾಚರಣೆಯನ್ನು ಶಾಲೆಯ ಮುಖ್ಯ ಶಿಕ್ಷಕಿ ಹಾಗೂ ಹೆಚ್.ಡಬ್ಲ್ಯೂ.ಬಿ. ಆದಂತಹ ಶ್ರೀಮತಿ ಶೀಲಾರವರ ಅಧ್ಯಕ್ಷತೆಯಲ್ಲಿ ನೆರವೇರಿಸಲಾಯಿತು.



ಕಬ್, ಫ್ಲಾಕ್, ಸ್ಕೌಟ್-ಗೈಡ್ ತಂಡಗಳು ಗ್ರಾಮದಲ್ಲಿ ವಿಶ್ವ ಭ್ರಾತೃತ್ವಕ್ಕೆ ಸಂಬಂಧಿಸಿದಂತೆ ಘೋಷಣೆಯೊಂದಿಗೆ ನಡೆಸಲಾಯಿತು. ಜಾಥಾ ನಂತರ ಕಬ್ -ಫ್ಲಾಕ್ ಗ್ರೀಟಿಂಗ್ಸ್ ಇತರ ಚಟುವಟಿಕೆಗಳನ್ನು ನೀಡಿ ಪೋಷಕರ ಮನ ತಣಿಸಿದರು. ಶಿಸ್ತು, ಭಾವೈಕ್ಯತೆಯ ಬಗ್ಗೆ ಮಕ್ಕಳಲ್ಲಿ ಪೋಷಕರಲ್ಲಿ, ಸಾರ್ವಜನಿಕರಲ್ಲಿ ಮೂಡಿಸುವ ಚಟುವಟಿಕೆಗಳನ್ನು ನೀಡಲಾಯಿತು.

ಸಮಾರಂಭದಲ್ಲಿ ಶ್ರೀ ಶಿವನಂಜಪ್ಪ ಮಾತನಾಡುತ್ತಾ ರಾಜ್ಯ ಮುಖ್ಯ ಆಯುಕ್ತರ ಆದರ್ಶ ನಮ್ಮೆಲ್ಲರಿಗೂ ಮಾರ್ಗದರ್ಶನ ಎಂದು ಹೇಳುವ ಮೂಲಕ ಸಂಸ್ಥೆಯ ಸಾಧನೆ ಬಗ್ಗೆ ತಿಳಿಸಿದರು.

## ರಾಯಚೂರು

ಫೆಬ್ರವರಿ 22ರಂದು ರಾಯಚೂರು ಜಿಲ್ಲಾ ಸಂಸ್ಥೆಯಿಂದ "ಮತದಾನ ಜಾಗೃತಿ" ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಂದ ಜಾಥಾ ನಡೆಸಲಾಯಿತು. ಶ್ರೀ ಎಸ್.ಬಿ. ಪಾಟೀಲ್ ಹೆಚ್ಚುವರಿ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು



ಜಾಥಾಕ್ಕೆ ಚಾಲನೆ ನೀಡಿದರು. ಶ್ರೀ ಬಿ.ಕೆ. ನಂದನೂರು ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಪ್ರತಿಜ್ಞಾವಿಧಿ ಬೋಧಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟರ್-ಗೈಡರ್‌ಗಳು ಉಪಸ್ಥಿತರಿದ್ದರು.

## ಶಿವಮೊಗ್ಗ

ಅಖಿಲ ಭಾರತ ವೀರಶೈವ ಮಹಾಸಭಾ (ರಿ.) ಹೊಸನಗರ ಇವರ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ಮಕರ ಸಂಕ್ರಮಣ ಸಮಾರಂಭದಲ್ಲಿ ಕೊಡಚಾದ್ರಿ ಕಾಲೇಜಿನ ಸ್ಕೌಟ್ಸ್-ಗೈಡ್ಸ್ ಘಟಕದ 10 ರೋವರ್ಸ್ ಮತ್ತು 10 ರೇಂಜರ್ಸ್‌ಗಳು ಸ್ವಯಂ ಸೇವಕರಾಗಿ ಭಾಗವಹಿಸಿದ್ದರು.

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಡಾ॥ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು, ಮುರುಘಾಮಠ ಇವರ ದಿವ್ಯಸಾನಿಧ್ಯದಲ್ಲಿ ಮಾನ್ಯಶ್ರೀ ಬಿ.ಎಸ್. ಯಡಿಯೂರಪ್ಪ, ವಿರೋಧಪಕ್ಷದ ನಾಯಕರು, ಕರ್ನಾಟಕ ಸರ್ಕಾರ ಕಾರ್ಯಕ್ರಮ ಉದ್ಘಾಟಿಸಿದರು.



## ಉಡುಪಿ

ಸಾರ್ವಜನಿಕ ಶಿಕ್ಷಣ ಇಲಾಖೆ, ಕಾರ್ಕಳ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಇದರ ಸಂಯುಕ್ತ ಆಶ್ರಯದಲ್ಲಿ ಕಾರ್ಕಳ ತಾಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ ಭಗವಾನ್ ಶ್ರೀ ಬಾಹುಬಲಿ ಪ್ರವಚನ ಮಂದಿರದಲ್ಲಿ ಜರುಗಿತು. ಕಾರ್ಕಳ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಎಂ.ಕೆ. ವಿಜಯ ಕುಮಾರ್ ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ತಾಲ್ಲೂಕು ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಮಾಲಿನಿ ಜೆ ಶೆಟ್ಟಿ ನೆರವೇರಿಸಿದರು. ಮುಖ್ಯ ಅತಿಥಿಯಾಗಿ ಉಡುಪಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಮುಖ್ಯ ಆಯುಕ್ತೆ ಶ್ರೀಮತಿ ಶಾಂತಾ ವಿ. ಆಚಾರ್ಯ, ಸ್ಕೌಟ್ ಆಯುಕ್ತ ಡಾ॥ ವಿಜಯೇಂದ್ರ ವಸಂತ್, ಗೈಡ್ ಆಯುಕ್ತೆ ಶ್ರೀಮತಿ ಜ್ಯೋತಿ ಜೆ. ಪೈ, ಗೈಡ್ ತರಬೇತಿ ಆಯುಕ್ತೆ ಶ್ರೀಮತಿ ಸಾವಿತ್ರಿ ಮನೋಹರ್, ಜಿಲ್ಲಾ ಕಾರ್ಯದರ್ಶಿ, ಶೀ ಐ.ಕೆ. ಜಯಚಂದ್ರರಾವ್ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಗಣೇಶ್ ಜಾಲ್ಸೂರು, ಜಿಲ್ಲಾ ಸಂಘಟಕ ಶ್ರೀ ನಿತಿನ್ ಅಮೀನ್, ಮತ್ತಿತರರು ಉಪಸ್ಥಿತರಿದ್ದರು.

ಪೇಪರ್ ಕ್ರಾಫ್ಟ್, ಮೆಹೆಂದಿ, ಕಾಲೊರಡು ತಯಾರಿ, ಬೆಂಕಿ ಬಳಸದೆ ಅಡುಗೆ ತಯಾರಿ, ದೇಶೀಯ ಉಡುಗೆ ತೊಡುಗೆ ಮುಂತಾದ ಚಟುವಟಿಕೆಗಳ ನಡೆಸಲಾಯಿತು. ಇದೇ ಸಂದರ್ಭದಲ್ಲಿ ಕಾರ್ಕಳದ ದಂತವೈದ್ಯರ ತಂಡದಿಂದ ಆರೋಗ್ಯದ ಮಾಹಿತಿಯನ್ನು ನೀಡಲಾಯಿತು. ಸಂಜೆ ಪರಿಸರ, ಆರೋಗ್ಯ, ಪ್ಲಾಸ್ಟಿಕ್, ವಿಷಯ ಸಂಬಂಧಿತ ಘೋಷಣಾ ಫಲಕಗಳೊಂದಿಗೆ ನಗರದುದ್ದಕ್ಕೂ ಮೆರವಣಿಗೆ ನಡೆಯಿತು.

ಸಂಜೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆ-ಯನ್ನು ಶ್ರೀಮತಿ ಜ್ಯೋತಿ ಜೆ. ಪೈಯವರು ವಹಿಸಿದ್ದರು. ಮುಖ್ಯ ಅತಿಥಿ ಪುರಸಭಾ ಸದಸ್ಯ ಶ್ರೀ ಪ್ರದೀಪ್ ರಾಣೆಯವರು ಪ್ರಮಾಣ ಪತ್ರವನ್ನು ವಿತರಿಸಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತೆ ಶ್ರೀಮತಿ ಶಾಂತಾ ವಿ. ಆಚಾರ್ಯ,



ಶ್ರೀಮತಿ ಜ್ಯೋತಿ ಜೆ. ಪೈ, ಶ್ರೀಮತಿ ಸಾವಿತ್ರಿ ಮಹೋಹರ್ ಹಾಗೂ ರಾಜ್ಯ ಗೈಡ್ ಪ್ರಶಸ್ತಿ ವಿಜೇತೆ ಶ್ರೀಮತಿ ಯಶೋದಾ ಹೆಗ್ಡೆ ಇವರನ್ನು ಸನ್ಮಾನಿಸಲಾಯಿತು. ಕಾರ್ಯಕ್ರಮದಲ್ಲಿ ತಾಲ್ಲೂಕಿನ 600 ಸ್ಕೌಟ್ಸ್-ಗೈಡ್ಸ್ ಹಾಗೂ 55 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

* ಫೆಬ್ರವರಿ 15 ರಿಂದ 16 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಇದರ ಅನುದಾನ ಅಡಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯು ಉಡುಪಿ ಜಿಲ್ಲೆಯಲ್ಲಿ ಕಬ್ ಬುಲ್‌ಬುಲ್‌ಗಳಿಗೆ ಜಿಲ್ಲಾ ದರ್ಶನ ಕಾರ್ಯಕ್ರಮವನ್ನು ನಡೆಸಲಾಯಿತು. ಕಾರ್ಯಕ್ರಮಕ್ಕೆ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಡಾ. ವಿಜಯೇಂದ್ರ ವಸಂತ್ ಇವರು ಜಿಲ್ಲಾ ದರ್ಶನ ಉದ್ದೇಶ ಇದೊಂದು ಉತ್ತಮ ಕಾರ್ಯಕ್ರಮವಾಗಿದ್ದು ನಮ್ಮ ಸಂಸ್ಕೃತಿಯ ನೈಜ ಪರಿಚಯ ಹಾಗೂ ಹೊಸ ಹೊಸ ಅನುಭವ ದೊರೆಯುವುದು ಎಂದರು. ಕಾರ್ಯಕ್ರಮದಲ್ಲಿ ಯು ಕಮಲಾ ಬಾಯಿ ಶಾಲೆಯ ದೈಹಿಕ ಶಿಕ್ಷಕರಾದ ಶ್ರೀ ಸುದರ್ಶನ್ ಇವರು ಪ್ರವಾಸಕ್ಕೆ ಶುಭ ಹಾರೈಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಐ.ಕೆ ಜಯಚಂದ್ರ ರಾವ್ ಇವರು ಜಿಲ್ಲಾ ದರ್ಶನಕ್ಕೆ ಚಾಲನೆ ನೀಡಿದರು. ಉಡುಪಿಯಿಂದ ಹೊರಟು ಮಂಗಳೂರಿನಲ್ಲಿ ಸ್ವಾಮಿ ವಿವೇಕಾನಂದ ತಾರಾಲಯ, ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ, ಪಿಲಿಕುಳ ಪ್ರಾಣಿ ಸಂಗ್ರಹಾಲಯ, ಗುತ್ತಿಗೆಮನೆ, ಮಡಿಕೆ ತಯಾರಿ ಕೇಂದ್ರ ಕೈಮಗ್ಗ ತಯಾರಿ ಘಟಕ, ಕದ್ರಿ ದೇವಾಲಯ, ಸಂಗೀತ ಕಾರಂಜಿ, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳ ಮಂಗಳೂರು ಇಲ್ಲಿ ವಸತಿ ವ್ಯವಸ್ಥೆ ಮಾಡಲಾಯಿತು. ಫೆಬ್ರವರಿ 16 ರಂದು ಕ್ಯಾಂಪಕೋ ಚಾಕಲೇಟ್ ಘಟಕ ಪುತ್ತೂರು, ಹನುಮಗಿರಿ ದೇವಾಲಯ ಈಶ್ವರಮಂಗಳ, ಧರ್ಮಸ್ಥಳದಲ್ಲಿ 12 ವರ್ಷಕ್ಕೊಮ್ಮೆ ನಡೆಯುವ ಮಹಾಮಸ್ತಕಾಭಿಷೇಕ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಕ್ಕಳು ಪುನೀತಗೊಂಡರು. ಕಾರ್ಕಳ ಮೂಲಕ ಸಂಜೆ 7 ಗಂಟೆಗೆ ಉಡುಪಿಗೆ ಹಿಂತಿರುಗಿ ಬಂದರು.

ಉಡುಪಿ ಜಿಲ್ಲೆಯ ಏಳು ಸ್ಥಳೀಯ ಸಂಸ್ಥೆಗಳಿಂದ 25 ಕಬ್ಸ್, 25 ಬುಲ್‌ಬುಲ್ಸ್ 7 ಶಿಕ್ಷಕರು ಜಿಲ್ಲಾ ದರ್ಶನದಲ್ಲಿ ಭಾಗವಹಿಸಿದ್ದರು ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್ ಶ್ರೀಮತಿ ಸುಮನ್ ಶೇಖರ್ ಜಿಲ್ಲಾ ದರ್ಶನ ಕಾರ್ಯಕ್ರಮವನ್ನು ಶ್ರೀಮತಿ ಶಾಂತಾ ವಿ. ಆಚಾರ್ಯ ಜಿಲ್ಲಾ ಮುಖ್ಯ ಆಯುಕ್ತರು ಇವರ ಮಾರ್ಗದರ್ಶನದಲ್ಲಿ ಸಂಘಟಿಸಿದರು.

## ವಿಜಯಪುರ

ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಉತ್ತನಾಳ ತಾಲ್ಲೂಕು, ಜಿಲ್ಲೆ ವಿಜಯಪುರ ಶಾಲೆಯ ಗೈಡ್ಸ್ ಕಂಪನಿಯ ವಿದ್ಯಾರ್ಥಿಗಳು ಗಣರಾಜ್ಯೋತ್ಸವ ಆಚರಣೆಯಲ್ಲಿ ಪಿರಾಮಿಡ್ ಆಕಾರದಲ್ಲಿ ನೃತ್ಯ ಪ್ರದರ್ಶಿಸಿದರು. ಈ ಸಂದರ್ಭದಲ್ಲಿ ಗೈಡ್ಸ್ ಕ್ಯಾಪ್ಟನ್ ಶ್ರೀಮತ ಲತಾ ಬಿರಾದಾರ ಮಕ್ಕಳಿಗೆ ಮಾರ್ಗದರ್ಶನ ಮಾಡಿದರು.

* ಜಿಲ್ಲಾಧಿಕಾರಿಗಳಾದ ಶ್ರೀ ಶೆಟ್ಟಣ್ಣವರ,ರಾಷ್ಟ್ರೀಯ ರಸ್ತೆ ಸುರಕ್ಷತಾ ಸಪ್ತಾಹ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಜಿಲ್ಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ ಜನರಿಗೆ ಜಾಗೃತಿ ಮೂಡಿಸಿದರು ಹಾಗೂ ರಸ್ತೆಯ ನಿಮಯಗಳನ್ನು ತಿಳಿದುಕೊಂಡು ಸಾರ್ವಜನಿಕರಿಗೆ ತಿಳಿಸುವುದರಲ್ಲಿ ಯಶಸ್ವಿಯಾದರು. ಕಾರ್ಯಕ್ರಮದಲ್ಲಿ ಕೊನೆಗೆ ವಿಜಯಪುರ ಗಾಂಧಿ ವೃತ್ತದಲ್ಲಿರುವ ಪೋಲಿಸ್ ಠಾಣೆಯಲ್ಲಿ ಸ್ವಚ್ಛತೆಯನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ನಾಗೇಶ ಶಿವಪೂರ, ಜಿಲ್ಲಾ ಸಂಘಟಕರಾದ ಶ್ರೀ ಪ್ರಕಾಶ ಹದ್ಲಿ, ಸ್ಕೌಟ್ಸ್ ಮಾಸ್ಟರ್ ಶ್ರೀ ಎಸ್.ಎಸ್. ಪಾಟೀಲ, ಶ್ರೀ ಮಾಳಗೊಂಡ ಉಪಸ್ಥಿತರಿದ್ದರು.

* ಜಿಲ್ಲೆಯ ಇಂಡಿ ತಾಲ್ಲೂಕಿನ ಸುಕ್ಷೇತ್ರ ಗೋಳಸಾರ ಗ್ರಾಮದ ಆರಾಧ್ಯದೈವ ಶ್ರೀಶ್ರೀಶ್ರೀ ಸದ್ಗುರು ಚಿನ್ಮಯಮೂರ್ತಿ ಮಹಾಶಿವಯೋಗಿಗಳ ಜಾತ್ರೆ ನಿಮಿತ್ತವಾಗಿ ಪ್ರತಿ ವರ್ಷದಂತೆ ಜಿಲ್ಲಾ ಮಟ್ಟದ ಸೇವಾ ಶಿಬಿರವನ್ನು ಹಮ್ಮಿಕೊಳ್ಳಲಾಯಿತು. ಜನವರಿ 21 ರಿಂದ 25 ರ ವರೆಗೆ ನಡೆದ "ಉಚಿತ ಸಾಮೂಹಿಕ ವಿವಾಹ" ಹಾಗೂ ಪ್ರತಿನಿತ್ಯ ನಡೆದ ದೀಪೋತ್ಸವ ಕಾರ್ಯಕ್ರಮದಲ್ಲಿ ಇಂಡಿ ತಾಲ್ಲೂಕಿನ



ಹೆಚ್.ಪಿ.ಎಸ್. ಖೇಡಗಿ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು SYHS ಮಿರಗಿ, SSPUHS ಸಾಲೋಟಗಿಯ ಸ್ಕೌಟ್‌ಗಳು ಮತ್ತು ಬಬಲೇಶ್ವರದ ಶ್ರೀ ಶಾಂತವೀರ ಪದವಿ ಮಹಾವಿದ್ಯಾಲಯದ ರೋವರ್ಸ್‌ಗಳು ಸೇವೆ ಸಲ್ಲಿಸಿದರು. ಜಿಲ್ಲಾ ಯುವ ಪರಿಷತ್ತಿನ ಅಧ್ಯಕ್ಷರಾದ ಶ್ರೀ ರಾಜಶೇಖರ ಖೇಡಗಿ ಅವರ ನೇತೃತ್ವದಲ್ಲಿ ಶಿಬಿರವು ಅತ್ಯಂತ ಯಶಸ್ವಿಯಾಗಿ ನಡೆಯಿತು. ಮಕ್ಕಳ ಸೇವೆ ಮೆಚ್ಚಿ ಶ್ರೀ ಮಠದ ಮಠಾಧೀಶರಾದ ಶ್ರೀ ಸದ್ಗುರು ಅಭಿನವ ಮುಂಡಲಿಂಗ ಮಹಾರಾಜರು ಶಿಬಿರದಲ್ಲಿ ಪಾಲ್ಗೊಂಡ ಎಲ್ಲ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್‌ಗಳಿಗೆ ಶಾಲು ಹೊದಿಸಿ ಸನ್ಮಾನಿಸಿದರು. ಈ ಸಮಯದಲ್ಲಿ ಮಾತನಾಡಿದ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್. ಎಸ್. ಬೊಮ್ಮನಹಳ್ಳಿಯವರು ಮಕ್ಕಳ ಸೇವೆಗೆ ಹರ್ಷ ವ್ಯಕ್ತಪಡಿಸಿದರು. ಇದೇ ಸಂದರ್ಭದಲ್ಲಿ ಶ್ರೀ ನಾಗೇಶ ಶಿವಪೂರ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು(ಸ್ಕೌ) ಹಾಗೂ ಶ್ರೀ ಪ್ರಕಾಶ ಹದ್ಲಿ ಜಿಲ್ಲಾ ಸಂಘಟಕರು ಉಪಸ್ಥಿತರಿದ್ದರು.

## ಯಾದಗಿರಿ

ಜನವರಿ 26ರಂದು 70ನೇ ಗಣರಾಜ್ಯೋತ್ಸವದ ಅಂಗವಾಗಿ ಯಾದಗಿರಿ ಜಿಲ್ಲಾ ಕ್ರೀಡಾಂಗಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಒಟ್ಟು 4 ತಂಡಗಳು ಭಾಗವಹಿಸಿದ್ದವು. ಯಾದಗಿರಿ ಜಿಲ್ಲೆಯ ಉಸ್ತುವಾರಿ ಸಚಿವರು ಶ್ರೀ ರಾಜಶೇಖರ್ ಪಾಟೀಲ್ ಅವರು ಪೆರೇಡ್ ತಂಡಗಳನ್ನು ವೀಕ್ಷಿಸಿದರು ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ವಂದನೆ ಸಲ್ಲಿಸಿದರು. ಯಾದಗಿರಿ ಜಿಲ್ಲೆಯ ಪದಾಧಿಕಾರಿಗಳಾದ ಶ್ರೀ ಸಿ.ಎಂ. ಪಟ್ಟೇದರ, ಜಿಲ್ಲಾ ಆಯುಕ್ತರು (ಸ್ಕೌ), ಶ್ರೀ ರಾಘವೇಂದ್ರ, ಜಿಲ್ಲಾ ಕಾರ್ಯದರ್ಶಿಗಳು ಮತ್ತಿತರರು ಭಾಗವಹಿಸಿದ್ದರು.



## ಇದು ಹಾವಲ್ಲ, ಕಂಬಳಿ ಹುಳು !



ವಿಜ್ಞಾನ-ವಿಸ್ಮಯ

ಗೆಳೆಯರೇ, ನೀವು ಈ ಚಿತ್ರದಲ್ಲಿ ನೋಡುತ್ತಿರುವುದು ಹಾವಲ್ಲ. ಇದೊಂದು ಕಂಬಳಿ ಹುಳು ! ನೋಡುತ್ತಿದ್ದಂತೆ ವಿಷಕಾರಿ ಹಾವಿನಂತೆ ಕಂಡು, ಇತರೇ ಜೀವಿಗಳಿಗೆ ತಕ್ಷಣಕ್ಕೆ ಭಯ ಮತ್ತು ಗಾಬರಿ ಹುಟ್ಟಿಸುತ್ತದೆ ಈ ಹುಳು. ತನ್ನ ಆತ್ಮ ರಕ್ಷಣೆಗಾಗಿ ಹೀಗೆ ವೇಷಧರಿಸಿರುವ ಇದು ಮಧ್ಯ ಅಮೇರಿಕಾದಲ್ಲಿ ಕಂಡು ಬರುವ ಒಂದು ಜಾತಿಯ ಕಂಬಳಿ ಹುಳು. ಅತ್ಯಂತ ವಿಷಕಾರಿಯಾದ ಮರದ ಹಾವಿನ (ಖಿಡಿಜಜ ಖಟಿಚಿಞಜ) ಮುಖವನ್ನು ಹೋಲುವ ಬಾಲವನ್ನು ಪ್ರಕೃತಿಯೇ ಇದಕ್ಕೆ ಕೊಡುಗೆಯಾಗಿ ನೀಡಿದೆ. ಹಾವಿನ ದೊಡ್ಡ ಕಣ್ಣುಗಳುಳ್ಳ ಮುಖವನ್ನು ಹೋಲುವ ಬಾಲದ ಹಿಂಬದಿಯ ಆಕಾರವನ್ನು ಇದು ಹೊಂದಿದೆ. ತನಗೆ ಅಪಾಯ ಎದುರಾದಾಗ ಅಥವಾ ತನ್ನನ್ನು ಬೇಟೆಯಾಡಿ ಭಕ್ಷಿಸಲು ಪಕ್ಷಿ ಮುಂತಾದ ಪ್ರಾಣಿಗಳು ಹತ್ತಿರ ಬಂದಾಗ ಗಾಳಿಯಲ್ಲಿ ಹಾವಿನಂತೆ ಬಾಲ ಆಡಿಸುತ್ತಾ ಆ ಭಕ್ಷಕ ಪ್ರಾಣಿಗಳನ್ನೇ ಭಯಭೀತಗೊಳಿಸಿ ಓಡುವಂತೆ ಮಾಡುತ್ತದೆ ! ತನ್ನ ಜೀವ ಉಳಿಸಿಕೊಳ್ಳುತ್ತದೆ.

ನಿಸರ್ಗವು ಎಲ್ಲ ಜೀವಿಗಳಿಗೂ ತನ್ನದೇ ಆದ ಆತ್ಮರಕ್ಷಣಾ ತಂತ್ರಗಳನ್ನು, ಅಗತ್ಯ ಕೌಶಲ್ಯಗಳನ್ನೂ ನೀಡಿದೆ. ಇದು ಜೀವಜಗತ್ತಿನ ಎಲ್ಲಾ ಜೀವಿಗಳೂ ಈ ಭೂಮಿಯಲ್ಲಿ ಬದುಕುಳಿಯಲೆಂಬ ಆಶಯವನ್ನು ಸಾರುತ್ತದೆ. ಜೀವಿ ಎಷ್ಟೇ ಚಿಕ್ಕದಿರಲಿ ಎಷ್ಟೇ ದೊಡ್ಡದಿರಲಿ ಅದರ ಸಂತತಿ ಮಾತ್ರ ಇಲ್ಲಿ ಬದುಕಿ ಉಳಿಯುವುದಕ್ಕೆ ಇದು ಸಹಕಾರಿಯಾಗಿದೆ. ಆದರೂ, ಕೆಲವು ಜೀವಿಗಳು ಭೂಮಿಯಮೇಲೆ ಅಳಿದುಹೋಗಿವೆ. ಅದಕ್ಕೆ ಕಾರಣ, ಸುಧೀರ್ಗ ವಿಕಾಸದ ಹಾದಿ ಅಥವಾ ಮನುಷ್ಯನ ದುರಾಸೆಗಳು ಕಾರಣವಾಗಿದೆ. ಪರಸ್ಪರ ಹೊಂದಾಣಿಕೆಯ ಬದುಕೇ ಪ್ರಕೃತಿ ನಮಗೆ ಕಲಿಸಿರುವ ಪಾಠ.

– ಚಳ್ಳಕೆರೆ ಯರ್‍ರಿಸ್ವಾಮಿ

# ದ್ವಿ ಪಾತ್ರ ನಾಯಕ: ಬಿ.ಪಿ.



ಎಂ.ಎನ್. ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

ತುಂಟತನ, ಜೇಷ್ಟೆಗಳಿಗೆ ಮಿತಿಯೇ ಇಲ್ಲ. ಎಲ್ಲಿಲ್ಲದ ಉತ್ಸಾಹ, ಯಾವಾಗಲೂ ಭಿನ್ನವಾದದ್ದನ್ನು ಮಾಡಬೇಕೆಂಬ ತವಕ, ತನ್ನ ಅಣಕು ಮತ್ತು ಅಭಿನಯದ ಮೂಲಕ ಸದಾ ಸುತ್ತಲಿರುವವರನ್ನು ನಗೆಗಡಲಲ್ಲಿ ಮುಳುಗಿಸುತ್ತಿದ್ದ ಅಪ್ರತಿಭ ಬಾಲಕನೇ ಬೇಡನ್ ಪೊವೆಲ್. ಎಂಟು ವರ್ಷದವನಿದ್ದಾಗಲೇ "ನಾನು ದೊಡ್ಡವನಾದ ಮೇಲೆ ಪಾಲಿಸಬೇಕಾದ ನಿಯಮಗಳು" ಎಂದು ತನಗೆ ತಾನು ಒಂದು ನೀತಿ ಸಂಹಿತೆ ಹಾಕಿಕೊಂಡಿದ್ದನೆಂದರೆ ನಂಬಲಸಾಧ್ಯ! ಅದು ಹೀಗಿತ್ತು. "ಬಡವರು ನಮ್ಮಷ್ಟೆ ಸ್ಥಿತಿವಂತರಾಗುವಂತೆ ಪ್ರಯತ್ನಿಸುತ್ತೇನೆ. ಏಕೆಂದರೆ ಅವರಿಗೆ ನಮ್ಮಷ್ಟೇ ಸಂತೋಷವಾಗಿರುವ ಹಕ್ಕಿದೆ. ಸಾಧ್ಯವಾದಾಗಲೆಲ್ಲಾ ದೇವರನ್ನು ಪ್ರಾರ್ಥಿಸಬೇಕು ಆದರೆ ಕೇವಲ ಪ್ರಾರ್ಥಿಸುವುದರಿಂದ ಒಳ್ಳೆಯವರಾಗುವುದಿಲ್ಲ. ಕಠಿಣ ಪರಿಶ್ರಮದಿಂದ ಮಾತ್ರ ಅದು ಸಾಧ್ಯ ಎಂದು ತಿಳಿದಿರಬೇಕು."

**ಎಂಟು ವರ್ಷದ ಬಾಲಕನ ಮನಸ್ಸಿನಲ್ಲಿ ಎಂತಹ ಆದರ್ಶಗಳು !**

ಹತ್ತೊಂಬತ್ತು ವರ್ಷಕ್ಕೆ ಸೇನೆ ಸೇರಿ, ಮೆಫೆಕಿಂಗ್ ದಿಗ್ಬಂಧನದಿಂದ ಬ್ರಿಟೀಷ್ ಸೇನೆಯನ್ನು ಪಾರು ಮಾಡಿದ್ದು ಚರಿತ್ರೆ. 1900 ರಲ್ಲಿ ಇಂಗ್ಲೆಂಡಿಗೆ ವಿಜಯಿಯಾಗಿ ಮರಳುವಷ್ಟೊತ್ತಿಗೆ ಬಿ.ಪಿ. ಇಂಗ್ಲೀಷರ ಹೃದಯದಲ್ಲಿ ಮೂಡಿಬಿಟ್ಟಿದ್ದರು. ಮೆಫೆಕಿಂಗ್ ವಿಜಯದ ಹರ್ಷಾಚರಣೆ ಕಂಡ ವಿನ್‌ಸ್ಟನ್ ಚರ್ಚಿಲ್ ಬರೆಯುತ್ತಾರೆ . . .

"ಬಿ.ಪಿ. ಖ್ಯಾತಿ ಹಿಂದಿನ ಎಲ್ಲ ಸೇನಾನಿಗಳ ಕೀರ್ತಿಯನ್ನು ಮಂಕಾಗಿಸುವಂತಿತ್ತು. ಇಂಗ್ಲೀಷರು ಅವರನ್ನು ಅಸಾಧಾರಣ ಯುದ್ಧಪಟುವೆಂದು ಸ್ವೀಕರಿಸಿದರು. ಮಿಲಿಯಾಂತರ ಸಾಮಾನ್ಯರು ಮೆಫೆಕಿಂಗ್ ವಿಜಯದ ಬಗ್ಗೆ ಕೇಳುತ್ತಿದ್ದಂತೆಯೇ ಲಂಡನ್ ನಗರದ ಬೀದಿ ಬೀದಿಗಳಲ್ಲಿ ಸಂಭ್ರಮಿಸಿ, ಕೇಕೆ ಹಾಕಿಕೊಂಡು ಸಾಗರೋಪಾದಿಯಲ್ಲಿ ನೆರೆದರು. ಈ ರೀತಿಯ ರಾಷ್ಟ್ರೀಯತೆ ಸಂಭ್ರಮ ಕಂಡು ಕೇಳರಿಯದ್ದಾಗಿತ್ತು.....

1907 ಬೇಸಿಗೆ ರಾತ್ರಿಯೊಂದರಲ್ಲಿ, ಇಪ್ಪತ್ತು ಮಕ್ಕಳನ್ನು ಶಿಬಿರಾಗ್ನಿಯ ಸುತ್ತ ಕೂರಿಸಿಕೊಂಡು ಆಫ್ರಿಕಾ ಮತ್ತು ಇಂಡಿಯಾದಲ್ಲಿ ತನ್ನ ಸೇನಾ ಅನುಭವದ ಕಥೆಗಳನ್ನು ನಟನೆ ಮತ್ತು ಹಾಸ್ಯಗಳ ಮೂಲಕ ಹೇಳುತ್ತಿದ್ದರು, ಬಿ.ಪಿ. ಆಗತಾನೆ "ಸ್ಕೌಟಿಂಗ್ ಫಾರ್ ಬಾಯ್ಸ್" ಪುಸ್ತಕ ಹೊರಬಂದಿತ್ತು. ತನ್ನ ಸೇನಾ ಅವಧಿಯ ಅನುಭವ, "ಬಾಯ್ಸ್ ಬ್ರಿಗೇಡ್"ನ ಚಟುವಟಿಕೆಯ ವಿಸ್ತೃತ ಪ್ರಯೋಗಕ್ಕೆ ನಾಂದಿಯಾಯಿತು. ಅದೇ ಸ್ಕೌಟಿಂಗ್. ದೇಹದಂಡನೆ ಮತ್ತು ಕವಾಯತುಗಳನ್ನು ಬದಿಗಿರಿಸಿ ಸರಳ ಚಟುವಟಿಕೆಗಳ ಮೂಲಕ ಚಾರಿತ್ರವಂತ ಯುವ ಪೀಳಿಗೆಯ ನಿರ್ಮಾಣದತ್ತ ಅವರ ಚಿತ್ತ.

ಅರ್ನೆಸ್ಟ್ ಥಾಮ್‌ಸನ್ ಸೆಟಾನ್ ಎನ್ನುವ ಅಮೆರಿಕನ್ ಪರಿಸರ ಪ್ರಿಯ ಪ್ರಾರಂಭಿಸಿದ್ದ "ವುಡ್ ಕ್ರಾಫ್ಟ್ ಅಮೆರಿಕನ್" ಎನ್ನುವ ಬಾಲಕರ ಸಂಸ್ಥೆ, ಪ್ರಕೃತಿ ಅಧ್ಯಯನಕ್ಕೆ ಹೆಚ್ಚು ಒತ್ತು ನೀಡಿದ್ದು ಬಿ.ಪಿ. ರವರಿಗೆ ಸೂಕ್ತವೆನಿಸಿತು. ಹಾಗಾಗಿ ಬಿ.ಪಿ.ರವರು ಸೆಟಾನ್ ರವರೊಡನೆ ಚರ್ಚಿಸಿ ಮಕ್ಕಳಿಗಾಗಿ ತಮ್ಮ ಮಾರ್ಗಸೂಚಿ ಹಾಕಿಕೊಂಡರು.

"ಸೂಕ್ಷ್ಮಾವಲೋಕನ, ಜಾಡು ಹಿಡಿಯುವುದು, ವಸ್ತು ಸ್ಥಿತಿ ನಿರ್ಣಯಿಸುವುದು, ಕರಕುಶಲತೆ, ನಾವಿಕ ಸಾಮರ್ಥ್ಯ, ಜೀವ ರಕ್ಷಣೆ, ಆರೋಗ್ಯ, ಮಿತವ್ಯಯ, ಶಿಸ್ತು, ತ್ಯಾಗ, ಜವಾಬ್ದಾರಿ, ಪರಾಕ್ರಮ ಮತ್ತು ದೇಶಪ್ರೇಮ ಈ ಗುಣಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಉತ್ತಮ ಪ್ರಜೆಗಳ ನಿರ್ಮಾಣದತ್ತ ಎಳೆಯರನ್ನು ಕೊಂಡೊಯ್ಯುವುದು ಬಿ.ಪಿ. ರವರ ಘನೋದ್ದೇಶವಾಗಿತ್ತು.

ಎಲ್ಲರಿಗೂ ತಿಳಿದಂತೆ ಸ್ಕೌಟಿಂಗ್ ಇಲ್ಲಿಯ ತನಕ ಸುಮಾರು ಒಂದು ಬಿಲಿಯನ್ ಯುವಜನರನ್ನು ರೂಪಿಸಿರುವುದು ಹೆಮ್ಮೆಯ ವಿಷಯ. ಲಂಡನ್ನಿನ ಒಲಂಪಿಯಾದಲ್ಲಿ 1920 ರ ವಿಶ್ವ ಜಾಂಬೂರಿಯಲ್ಲಿ, ಎಳೆಯ ಬಾಲಕನೊಬ್ಬ ಮೈಕ್ ಮುಂದೆ ಹೋಗಿ, ನಾವು ವಿಶ್ವದ ಸ್ಕೌಟ್‌ಗಳು, ರಾಬರ್ಟ್ ಬೇಡನ್ ಪೊವೆಲ್‌ರನ್ನು "ಚೀಫ್ ಸ್ಕೌಟ್ ಆಫ್ ದ ವರ್ಲ್ಡ್" ಎಂದು ಘೋಷಿಸುತ್ತೇವೆ ಎಂದು ಬಿತ್ತರಿಸಿಯೇ ಬಿಟ್ಟ.

"ಆತ ಕೇಳಿದ್ದೆಲ್ಲಾ ಮಾನವ ಹೊರತಾಗಿಯೇ ಹೊರತು ತನಗಾಗಿ ಅಲ್ಲ" ಎಂದು ಓರ್ವ ಅಮೇರಿಕನ್ ಮಹಿಳೆ ಉದ್ಗರಿಸಿದ್ದಳು.

ಬಿ.ಪಿ.ಯವರ ಬಗ್ಗೆ ಎ.ಪಿ. ಹರ್ಬರ್ಟ್ ಹೇಳುವ ಹಾಗೆ............

ಕೆಲವೇ ಸಾಧಕರು ತಾವು ಸಾಧಿಸಿದ್ದನ್ನು ನೋಡಲು ಬದುಕಿರುತ್ತಾರೆ:
ಹೆಚ್ಚಿನವರಿಗೆ ಈ ಜಗತ್ತಿಗೆ ಒಬ್ಬ ಮಗನನ್ನು ಬಿಟ್ಟು ಹೋಗುವುದೇ ಹೆಮ್ಮೆ
ಯಾರಾದರೂ ಗತಿಸುವುದಕ್ಕೆ ಮುನ್ನ ತಮ್ಮ ಕನಸು ನನಸಾಗುವುದನ್ನು ಕಂಡಿದ್ದರೆ?
ನಿನ್ನ ಹಾಗೆ ಯಾರಾದರೂ ಇಷ್ಟೊಂದು ಜೀವಂತ ಸ್ಮಾರಕಗಳನ್ನು ಬಿಟ್ಟು ಹೋಗಿದ್ದಾರೆಯೇ?

# ಜಂತುಹುಳು ನಿವಾರಣೆ

ಡಾ. ವಸುಂಧರಾ ಭೂಪತಿ
ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿ[illegible]

ಮಣ್ಣಿನಲ್ಲಿ ಆಟವಾಡುವುದು, ಸರಿಯಾಗಿ ಬೇಯಿಸದ ಆಹಾರ, ಅರೆಬೆಂದ ಮಾಂಸ ಸೇವಿಸುವುದು, ಕಲುಷಿತ ನಿರು ಕುಡಿಯುವುದು, ಬರಿಗಾಲಲ್ಲಿ ಮಣ್ಣಿನಲ್ಲಿ ತಿರುಗಾಡುವುದು, ಮಲಬದ್ಧತೆ, ನಾಯಿ, ಬೆಕ್ಕು ಮುಂತಾದ ಸಾಕುಪ್ರಾಣಿಗಳೊಂದಿಗೆ ಆಟ ಆಡುವುದುರಿಂದಲೂ ಜಂತುಹುಳುಗಳ ತೊಂದರೆ ಕಾಣಿಸಿಕೊಳ್ಳಬಹುದು.

ಜಂತುಹುಳುವಿನ ತೊಂದರೆ ಇದ್ದಲ್ಲಿ ರಕ್ತಹೀನತೆ ಕಂಡು ಬರುತ್ತದೆ. ಆಹಾರದಲ್ಲಿ ಆಸಕ್ತಿ ಇರುವುದಿಲ್ಲ. ಹೊಟ್ಟೆನೋವು, ರಾತ್ರಿ ಹೊತ್ತು ಗುದಭಾಗದಲ್ಲಿ ತುರಿಕೆ, ನಿಶ್ಶಕ್ತಿ ಉಂಟಾಗಬಹುದು. ನಿದ್ರೆಯಲ್ಲಿ ಹಲ್ಲು ಕಡೆಯುವುದು, ಮುಖದ ಮೇಲೆ ಬಿಳಿಯ ಕಲೆಗಳು, ಬೆಳವಣಿಗೆ ಕುಂಠಿತವಾಗುವುದು, ಮೂಗಿನ ತುದಿಯಲ್ಲಿ ತುರಿಕೆಯಾಗುವುದು, ಮಲವಿಸರ್ಜನೆಯ ಸಮಯದಲ್ಲಿ ಜಂತುಹುಳು ಬೀಳುವುದು.

ಮುನ್ನೆಚ್ಚರಿಕೆ ಕ್ರಮ :- ವೈಯಕ್ತಿಕ ಸ್ವಚ್ಛತೆ ಬಹಳ ಮುಖ್ಯ. ಪ್ರತಿಬಾರಿ ಆಹಾರ ಸೇವನೆಗೆ ಮುಂಚೆ ಮತ್ತು ಮಲವಿಸರ್ಜನೆಯ ನಂತರ ಕೈಕಾಲುಗಳನ್ನು ಸಾಬೂನಿನಿಂದ ತೊಳೆದುಕೊಳ್ಳಬೇಕು.

ಬರಿಗಾಲಲ್ಲಿ ಓಡಾಡಬಾರದು. ಬಯಲಲ್ಲಿ ಮಲವಿಸರ್ಜನೆಗೆ ಹೋಗಬಾರದು. ಯಾವಾಗಲೂ ಚಪ್ಪಲಿ ಅಥವಾ ಶೂ ಧರಿಸಿಯೇ ಓಡಾಡಬೇಕು.

ನೀರನ್ನು ಕುದಿಸಿ, ಆರಿಸಿ ಕುಡಿಯಬೇಕು.

**ಮನೆಮದ್ದು :**

* ಪ್ರತಿದಿನ ಬೆಳಿಗ್ಗೆ ಒಂದು ನಿಂಬೆಹಣ್ಣಿನ ರಸದಲ್ಲಿ ಎರಡು ಚಿಟಕೆ ಹುರಿದ ಹಿಂಗು ಮಿಶ್ರಮಾಡಿ ಕುಡಿಯಬೇಕು.
* ಬೇವಿನ ಚಿಗುರೆಲೆ 10 ಗ್ರಾಂ ಮತ್ತು ಓಮಕಾಳು 10 ಗ್ರಾಂ ಎರಡನ್ನೂ ಅರೆದು ಜೇನುತುಪ್ಪ ಬೆರೆಸಿ ಸೇವಿಸಬೇಕು.
* ಒಂದು ಚಮಚ ಪಾರಿಜಾತದ ಎಲೆಯಪುಡಿಗೆ ನಿರು ಬೆರೆಸಿ ಒಂದು ವಾರದ ಕಾಲ ಸೇವಿಸಬೇಕು.
* ಪಪ್ಪಾಯಿ ಹಣ್ಣಿನ ಬೀಜವನ್ನು ನೆರಳಿನಲ್ಲಿ ಒಣಗಿಸಿ ಪುಡಿಮಾಡಿ, ರಾತ್ರಿ ಮಲಗುವ ಮುನ್ನ ಒಂದು ಚಮಚ ಪುಡಿಯನ್ನು ಬಿಸಿನೀರಿನಲ್ಲಿ ಬೆರೆಸಿ 7 ದಿನ ಸೇವನೆ ಮಾಡಬೇಕು.
* 50 ಗ್ರಾಂ ವಾಯುವಿಡಂಗದ ಬೀಜವನ್ನು ತೆಗೆದುಕೊಂಡು 500 ಮಿಲಿ ಲೀಟರ್ ನೀರಿನಲ್ಲಿ ಹಾಕಿ ಕುದಿಸಿ ನೀರು ಅರ್ಧದಷ್ಟಾದಾಗ ಉಳಿದ ಕಷಾಯವನ್ನು ಬೆಳಿಗ್ಗೆ ಹಾಗೂ ರಾತ್ರಿ ಕುಡಿಯಬೇಕು.
* ಮುತ್ತುಗದ ಬೀಜಗಳನ್ನು ಹಾಲಿನಲ್ಲಿ ಚೆನ್ನಾಗಿ ಕುದಿಸಿ, ನಂತರ ಬೀಜಗಳನ್ನು ನೆರಳಿನಲ್ಲಿ ಒಣಗಿಸಿ ಪುಡಿಮಾಡಿ ಗಾಳಿಯಾಡದ ಡಬ್ಬದಲ್ಲಿ ತೆಗೆದಿಡಬೇಕು. ಒಂದು ಚಮಚಮಚ ಪುರಿಯನ್ನು ಹಾಲಿನೊಂದಿಗೆ ಬೆರೆಸಿ ದಿನಕ್ಕೆ ಮೂರು ಬಾರಿ ಸೇವಿಸಬೇಕು.

# ಶುದ್ಧ ಹವೆಯ ಮಹತ್ವ

ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿ

ಪ್ರಾಣ ವಾಯುವಿಲ್ಲದೇ ನಾವು ಕೇವಲ ಮೂರು ನಿಮಿಷ ಮಾತ್ರ ಬದುಕಬಹುದು. ಪ್ರಾಣಕ್ಕೆ ಪ್ರಾಣ ವಾಯುವೇ ಪ್ರಮುಖ. ಈ ಪ್ರಾಣವಾಯು ನಮಗೆ ಸಿಗುವುದೇ ಗಿಡ ಮರಗಳಿಂದ. ಆದ್ದರಿಂದ ಹಸಿರಿನಿಂದ ಉಸಿರು ಎಂಬುದನ್ನು ನಾವು ಅರಿಯಬೇಕು. ಆದರೆ ಒಂದು ಕಡೆಗೆ ಪ್ರಗತಿಯ ಹೆಸರಿನಲ್ಲಿ ಮರಗಳನ್ನು ಕಡಿದರೆ ಇನ್ನೊಂದೆಡೆ ವಾಹನಗಳಿಂದ ಬರುವ ಪ್ರದೂಷಣ ಅದರಲ್ಲೂ ಕಾರ್ಬನ್ ಮಾನೋಕ್ಸೈಡ್, ಪಾರ್ಟಿಕ್ಯುಲೇಟ್ 10 ಮತ್ತು ಓಝೋನ್ ಇದರಿಂದ ಉಸಿರಾಟದ ತೊಂದರೆ ಉಂಟಾಗುತ್ತವೆ. ಒಬ್ಬ ವ್ಯಕ್ತಿ ತನ್ನ ಬದುಕಿನಲ್ಲಿ 40 ಪೌಂಡ್ ಧೂಳನ್ನು ಶ್ವಾಸಕೋಶದಲ್ಲಿ ಸೇವಿಸುತ್ತಾನೆ. ಇದರ ಮೇಲೆ ಧೂಮಪಾನ ಮಾಡಿದರೆ ಶ್ವಾಸಕೋಶದ ಕ್ಯಾನ್ಸರ್ ಜೊತೆಗೆ ಹೃದಯಾಘಾತದಿಂದ ಸಾವು ಸಂಭವಿಸುವುದು.

ಇದಕ್ಕೂ ಪ್ರಮುಖವಾಗಿ ಇಂದು ಸಾಂಕ್ರಾಮಿಕ ರೋಗಗಳಾದ ನೆಗಡಿ, ಕೆಮ್ಮು, ಹೆಚ್1 ಎನ್1, ಕ್ಷಯರೋಗಗಳು ಕೂಡ ಹವೆಯಿಂದ ಹರಡುತ್ತವೆ ಒಬ್ಬ ಕ್ರಿಕೇಟಿಗ ಒಂದು ಚೆಂಡನ್ನು ಪ್ರತಿ ಗಂಟೆಗೆ 19. ಕಿ.ಮೀ. ವೇಗದಲ್ಲಿ ಎಸೆದರೆ ಎದುರಾಳಿ ಅದನ್ನು ಹೊಡೆಯಬಹುದು. ಆದರೆ ಒಬ್ಬ ರೋಗಿ ಸೀನಿದರೆ ಪ್ರತಿ ಗಂಟೆಗೆ 166 ಕಿ.ಮೀ. ವೇಗದಲ್ಲಿ ಕೋಟ್ಯಾಂತರ ರೋಗಾಣುಗಳು ಹೊರಬರುತ್ತವೆ. ಎದರು ನಿಂತವರ ಮುಖಕ್ಕೆ ಅಪ್ಪಳಿಸಿ ಅವರಲ್ಲಿ ರೋಗವನ್ನು ಹರಡುತ್ತವೆ. ಆದ್ದರಿಂದ ಪ್ರತಿಯೊಬ್ಬರೂ ಕೆಮ್ಮುವಾಗ ಸೀನುವಾಗ ಕೈಗಳಿಂದ ಮುಖ ಮೂಗು ಮುಚ್ಚಿಕೊಂಡು ಒಂದು ಕಡೆಗೆ ತಿರುಗಿ ಕೆಮ್ಮಬೇಕು. ತಕ್ಷಣ ಕೈ ತೊಳೆದುಕೊಳ್ಳಬೇಕು ಇಲ್ಲ ಟಿಶ್ಯೂ ಪೇಪರ್ ಬಳಸಬೇಕು ಇದಲ್ಲದೆ ಜ್ವರ, ಗಂಟಲು ನೋವು, ಕೆಮ್ಮು ಇದ್ದವರು ಮುಖಕ್ಕೆ ಮಾಸ್ಕ್ ಹಾಕಿಕೊಂಡು ಇತರರಿಗೆ ಕಾಯಿಲೆ ಹಬ್ಬದಂತೆ ತಡೆಯಬೇಕು. ನೆನಪಿಡಿ ಹಸಿರೇ ಉಸಿರು. ಸುತ್ತಲೂ ಗಿಡಮರ ಬೆಳೆಸಿ ಸ್ವಚ್ಛ ಹವೆಯಲ್ಲಿ ವಾಯು ವಿಹಾರ ಮತ್ತು ಪ್ರಾಣಾಯಾಮ ಮಾಡಿ, ಆರೋಗ್ಯವಂತರಾಗಬೇಕು.

# ರೇಂಜರಿಂಗ್‌ನ ಉಗಮ ಮತ್ತು ಬೆಳವಣಿಗೆ

ಬಿ.ವಿ. ರಾಮಲತಾ
ಜಂಟಿ ರಾಜ್ಯ ಕಾರ್ಯದರ್ಶಿ
ಭಾರತ್, ಸ್ಕೌಟ್ಸ್ & ಗೈಡ್ಸ್, ಕರ್ನಾಟಕ

ಹಿಂದಿನ ಸಂಚಿಕೆಯಿಂದ . . .

## ಗ್ರಾಮೀಣ ರೇಂಜರಿಂಗ್ – 1975 :

ಒಟ್ಟಾರೆ ಒಬ್ಬ ಯುವತಿಯು ರೇಂಜರ್ ಕಾರ್ಯಕ್ರಮವನ್ನು ಪೂರ್ಣಗೊಳಿಸುವುದ ರೊಳಗೆ ಈ ಕೆಳಕಂಡ ಸಾಮರ್ಥ್ಯವನ್ನು ಹೊಂದುತ್ತಾಳೆ.

1. ರೇಂಜರಿಂಗ್ ಅನ್ನು ಜೀವನ ಶೈಲಿಯನ್ನಾಗಿ ಅಳವಡಿಸಿಕೊಳ್ಳುತ್ತಾಳೆ.
2. ಸಕ್ರಿಯವಾಗಿ ಪಾಲ್ಗೊಳ್ಳುವ ನಾಗರಿಕಳಾಗುತ್ತಾಳೆ.
3. ತನ್ನ ಕೌಶಲ, ವೃತ್ತಿಪರ ಹಾಗೂ ಇತರೆ ಚಟುವಟಿಕೆಗಳನ್ನು ಉತ್ತಮಪಡಿಸಿಕೊಂಡು ತಾನೂ ಸ್ವಾವಲಂಬಿಯಾಗಿ ಇತರರಿಗೂ ಸಹಾಯ ಮಾಡುವಂತಹವಳಾಗುತ್ತಾಳೆ.
4. ಆತ್ಮ ಗೌರವವುಳ್ಳ, ಇತರರ ಅನುಭವವನ್ನು ಗೌರವಿಸುವಂತಹ ಪ್ರಾಯೋಗಿಕ ವ್ಯಕ್ತಿಯಾಗಿ ಹೊರಹೊಮ್ಮುತ್ತಾಳೆ.
5. ಸಮುದಾಯ ಅಭಿವೃದ್ಧಿಯಲ್ಲಿ ತನ್ನ ಜವಾಬ್ದಾರಿಯಿದೆ ಎಂದು ಅರ್ಥಮಾಡಿಕೊಂಡು, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಮಾಡುತ್ತಾಳೆ.
6. ದೇವರಿಗೂ ಮಾನವರಿಗೂ ಸೇವೆ ಮಾಡುವಂತಹ ಸುಸಂಸ್ಕೃತ ಧಾರ್ಮಿಕ ಜೀವನವನ್ನು ನಡೆಸುತ್ತಾಳೆ.
7. ಭವಿಷ್ಯದಲ್ಲಿ ತನ್ನನ್ನು ಅರ್ಥಮಾಡಿಕೊಳ್ಳುವಂತಹ ಹಾಗೂ ಹೊಂದಿಕೊಳ್ಳುವಂತಹ ಜೀವನ ಸಂಗಾತಿಯನ್ನು ಆರಿಸಿಕೊಂಡು ಸಾಮರಸ್ಯದಿಂದ ವೈವಾಹಿಕ ಜೀವನವನ್ನು ನಡೆಸುತ್ತಾಳೆ.
8. ಸಾರ್ವಜನಿಕ ಸ್ವತ್ತನ್ನು ರಕ್ಷಿಸಲು ಶಕ್ತಿಮೀರಿ ಪ್ರಯತ್ನಿಸುತ್ತಾಳೆ.
9. ತನ್ನ ಕರ್ತವ್ಯವನ್ನು ದೇಶಕ್ಕೆ ಸಲ್ಲಿಸಲು ಹಾಗೂ ವಿಶ್ವ ಭ್ರಾತೃತ್ವದೆಡೆ ಒಲುಮೆಯನ್ನು ಬೆಳೆಸಿಕೊಳ್ಳಲು ಸಿದ್ಧಳಾಗುತ್ತಾಳೆ. ಅಂದರೆ ಮಾನವರಲ್ಲಿ ಶಾಂತಿ ಹಾಗೂ ಸದ್ಭಾವನೆಯನ್ನು ಮೂಡಿಸಲು ಸಿದ್ಧಳಾಗುತ್ತಾಳೆ.
10. ರೇಂಜರಿಗ್ ಕೌಶಲ ಮತ್ತು ಮೌಲ್ಯಗಳನ್ನು ಉಪಯೋಗಿಸಿ ಇತರರಿಗೆ ಸಹಾಯ ಮಾಡುವಾಗ ಸಕಾರಾತ್ಮಕ ಭಾವನೆಗಳೊಂದಿಗೆ ಮಾನವೀಯ ಮೌಲ್ಯಗಳಿಗೆ ಒಲವನ್ನು ತೋರಿಸುತ್ತಾ ಶಕ್ತಿ ಮೀರಿ ಪ್ರಯತ್ನಿಸುತ್ತಾಳೆ.
11. ನಮ್ಮ ರಾಷ್ಟ್ರದ ಪರಂಪರೆ ಹಾಗೂ ಸಂಸ್ಕೃತಿಯನ್ನುಳಿಸಿ ಬೆಳೆಸುವುದರಲ್ಲಿ ಮಾನವೀಯ ಮೌಲ್ಯಗಳಿಗೆ ಒಲುಮೆಯನ್ನು ತೋರಿಸುತ್ತಾ ತೊಡಗಿಸಿಕೊಳ್ಳುತ್ತಾಳೆ.
12. ರಾಷ್ಟ್ರೀಯ ಭಾವೈಕ್ಯತೆ, ಜನಸಂಖ್ಯಾ ಶಿಕ್ಷಣ, ಪರಿಸರ ಸಂರಕ್ಷಣೆ, ನೈರ್ಮಲ್ಯ ಮುಂತಾದ ರಾಷ್ಟ್ರೀಯ ಅಬಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಉತ್ತೇಜನ ನೀಡುತ್ತಾಳೆ.
13. ಇಷ್ಟಪಟ್ಟು ಗುಂಪಿನೊಂದಿಗೆ ಬೆಳೆಯುವಂತಹ ನುರಿತ ನಾಯಕಿಯಾಗುತ್ತಾಳೆ.
14. ಜಾಗತಿಕ ಆಗು ಹೋಗುಗಳಲ್ಲಿ ತಿಳುವಳಿಕೆಯನ್ನು ಹೊಂದಿರುತ್ತಾಳೆ.

ಮುಂದುವರೆಯುತ್ತದೆ....

# ಶ್ರದ್ಧಾಂಜಲಿ / Obituary



ದಿ॥ ಕೊಂಡಜ್ಜಿ ಬಸಪ್ಪ – ಕೆ. ಬಿ. ಸರ್ವಮಂಗಳಮ್ಮ ಅವರ ಪುತ್ರರಾದ ಶ್ರೀ ಕೆ.ಬಿ. ಲಿಂಗರಾಜ್ (68) ಅವರು ಅಲ್ಪಕಾಲದ ಅನಾರೋಗ್ಯದಿಂದ ದಿನಾಂಕ 9 ಫೆಬ್ರವರಿ 2019ರ ಶನಿವಾರ ಬೆಂಗಳೂರಿನಲ್ಲಿ ನಿಧನರಾದರು. ಇವರು ಅವಿವಾಹಿತರಾಗಿದ್ದರು. ಶ್ರೀ ಲಿಂಗರಾಜ್ ಅವರು ಕೃಷಿಕರಾಗಿ ಮತ್ತು ಸಿನಿಮಾ ವಿತರಕರಾಗಿ ಕಾರ್ಯನಿರ್ವಹಿಸಿದ್ದರು. ಶ್ರೀಯುತರು ಸ್ಕೌಟ್–ಗೈಡ್ ಸಂಸ್ಥೆಯ ಅಜೀವ ಸದಸ್ಯರಾಗಿ ಚಳವಳಿ ಬೆಳವಣಿಗೆಗೆ ಸಹಕರಿಸಿದರು.

ಅವರ ಆಶಯದಂತೆ ಪಾರ್ಥಿವ ಶರೀರವನ್ನು ನಗರದ ಎಂ.ಎಸ್. ರಾಮಯ್ಯ ಆಸ್ಪತ್ರೆಗೆ ದಾನಮಾಡಲಾಯಿತು. ಶ್ರೀ ಲಿಂಗರಾಜ್ ಅವರು ಅಪಾರ ಸಂಖ್ಯೆಯ ಬಂದು–ಬಳಗ ಹಾಗೂ ಮಿತ್ರರನ್ನು ಅಗಲಿದ್ದಾರೆ. ಅವರ ಆತ್ಮಕ್ಕೆ ಶಾಂತಿ ನೀಡಲು ಹಾಗು ಅವರ ಕುಟುಂಬದವರಿಗೆ, ಬಂಧು ಮಿತ್ರರಿಗೆ ದುಃಖವನ್ನು ಭರಿಸುವ ಶಕ್ತಿಯನ್ನು ಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.



Smt. Meera Harinath, D/o. Late Sri V.P. Deenadayalu Naidu, Former State Chief Commissioner and National Commissioner, Bharat Scouts & Guides passed away on 06-02-2019 in Chennai. Smt. Meera Harinath was a teacher and worked as Head of the Dept. of English and Home Science in the Crescent Matricultion School, Chennai. She leaves behind her husband Sri J.V. Harinath who was the CEO of Addison & Co., Chennai and Son of Sri J.H. Sumanth, daughter-in-law Smt. Vaishali and grand children who live in California, U.S.A., We Pray God Almighty to give strength to the members of the family to bear this loss.

May Her Soul Rest in Peace.



ಶ್ರೀ ಎನ್.ಕೆ. ಸುಬ್ರಹ್ಮಣ್ಯ (ಸಿ.ಟಿ. ವೆಂಕಪ್ಪ, ನಿವೃತ್ತ ಚಾಲಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರ ಅಳಿಯ) ಇವರು ದಿನಾಂಕ 07.02.2019ರಂದು ಮೈಸೂರಿನಲ್ಲಿ ನಿಧನರಾದರು. ಇವರಿಗೆ 44 ವರ್ಷ ವಯಸ್ಸಾಗಿತ್ತು. ಇವರು ಮೈಸೂರು ಜಿಲ್ಲೆ ಹುಣಸೂರಿನಲ್ಲಿ ಗ್ರಾಮಲೆಕ್ಕಿಗರಾಗಿ ಕಾರ್ಯ ನಿರ್ವಹಿಸುತ್ತಿದ್ದರು.

ಇವರು ತಮ್ಮ ಪತ್ನಿ ಮಮತಾ, ಒಬ್ಬ ಪುತ್ರ ಹಾಗೂ ಅಪಾರ ಬಂಧು–ಮಿತ್ರರನ್ನು ಅಗಲಿದ್ದಾರೆ.

ಇವರ ನಿಧನದಿಂದ ಉಂಟಾದ ದುಃಖವನ್ನು ಭರಿಸಲು ಅವರ ಕುಟುಂಬದವರಿಗೆ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ರಾಜ್ಯ ಕಾರ್ಯದರ್ಶಿ



ಫೆಬ್ರವರಿ 04ರಂದು ಹಾವೇರಿ ಜಿಲ್ಲಾಡಳಿತ ಪೋಲೀಸ್ ಇಲಾಖೆ ಹಾಗು ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಡೆದ "ರಾಷ್ಟ್ರೀಯ ರಸ್ತೆ ಸುರಕ್ಷತಾ ಸಪ್ತಾಹ" ಕಾರ್ಯಕ್ರಮದಲ್ಲಿ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಪರಶುರಾಮ ಹೆಚ್ಚುವರಿ ಪೋಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಜಗದೀಶ್, ಅಪರ ಜಿಲ್ಲಾಧಿಕಾರಿಗಳಾದ ಶ್ರೀ ವಿನೋದ್ ಕುಮಾರ್ ಮತ್ತು ಸ್ಕೌಟ್ಸ್-ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.




ಫೆಬ್ರವರಿ 2ರಂದು ವಿಜಯನಗರ ಸ್ಥಳೀಯ ಸಂಸ್ಥೆ ಜ್ಞಾನಾಕ್ಷಿ ವಿದ್ಯಾಸಂಸ್ಥೆ ಆವರಣದಲ್ಲಿ ಏರ್ಪಡಿಸಿದ ವಾರ್ಷಿಕ ರ್‍ಯಾಲಿಯ ಕಾರ್ಯಕ್ರಮದಲ್ಲಿ ಪರಮಪೂಜ್ಯ ಶ್ರೀ ಶ್ರೀ ಜಯೇಂದ್ರಪುರಿ ಮಹಾಸ್ವಾಮಿಜಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಕೆ. ಖಾನ್ ಜಿಲ್ಲಾ ಆಯುಕ್ತರುಗಳಾದ ಶ್ರೀ ಪಿ. ಪಳನಿ ಶ್ರೀಮತಿ ಉಮಾ ನಾಗೇಶ್, ಸಂಸ್ಥೆಯ ಕಾರ್ಯದರ್ಶಿ ಶ್ರೀ ಹೈಗ್ರೀವಾಚಾರ್, ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಜಯಲಕ್ಷ್ಮಿ ಪ್ರಕಾಶ್ ಚಿತ್ರದಲ್ಲಿದ್ದಾರೆ.



ಫೆಬ್ರವರಿ 22ರಂದು ಶಿವಮೊಗ್ಗ ಜಿಲ್ಲಾ ಸಂಸ್ಥೆಯಿಂದ ಏರ್ಪಡಿಸಿದ ಲಾರ್ಡ್ ಬೇಡನ್ ಪಾವೆಲ್ ಹಾಗೂ ಲೇಡಿ ಬೇಡನ್ ಪಾವೆಲ್ ರವರ ಜನ್ಮದಿನಾಚರಣೆಯ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಉಮೇಶ್ ಶಾಸ್ತ್ರಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದು ಕುಮಾರ್, ಜಿಲ್ಲಾ ಖಜಾಂಚಿ ಶ್ರೀ ಚೂಡಾಮಣಿ ಇ. ಪವಾರ್, ಶ್ರೀ ವೈ.ಆರ್. ವೀರೇಶಪ್ಪ ಮತ್ತು ಶ್ರೀ ಟಿ.ಎ. ಮಂಜುನಾಥಾಚಾರ್, ಶ್ರೀ ಎ.ವಿ. ರಾಜೇಶ್, ಶ್ರೀಮತಿ ಭಾರತಿ ಡಯಾಸ್, ಶ್ರೀ ಡಿ.ಎನ್. ನೂರ್ ಅಹಮದ್ ಹಾಗೂ ಕಬ್ಸ್‌ಗಳು, ಸ್ಕೌಟ್ಸ್-ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.



ವಿಜಯಪುರ ಜಿಲ್ಲಾ ಸಂಸ್ಥೆಯಿಂದ ಏರ್ಪಡಿಸಿದ್ದ "ರಾಷ್ಟ್ರೀಯ ರಸ್ತೆ ಸುರಕ್ಷತಾ ಸಪ್ತಾಹ" ಕಾರ್ಯಕ್ರಮದಲ್ಲಿ ಸ್ಕೌಟ್ಸ್‌ಗಳು ಹಾಗೂ ಸ್ಕೌಟರ್-ಗೈಡರ್‌ಗಳು ಮತ್ತು ಅರಕ್ಷಣ ಇಲಾಖೆ ಸಿಬ್ಬಂದಿ ಭಾಗವಹಿಸಿದ್ದರು.

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages: 36)

## "ಜಂತುಹುಳು ನಿವಾರಣಾ ದಿನಾಚರಣೆ" ಅಂಗವಾಗಿ ವಿವಿಧ ಜಿಲ್ಲೆಗಳಲ್ಲಿ ನಡೆದ ಜನಜಾಗೃತಿ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿರುವುದು.


ಬಾಗಲಕೋಟೆ


ಮಂಡ್ಯ


ಹಾಸನ



ಬೆಳಗಾವಿ


ಕಾರವಾರ


ಕೋಲಾರ



If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha** #39, Palace Road, Bengaluru - 560 001. **Publisher & Editor : Chinnaswamy Reddy, Printed by : L. Lingappa**
**M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru 26